KA / BG-GPO / 2515 / WPP-47 / 2006-2008




# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಜುಲೈ ೬, ೨೦೦೬ (ಆಷಾಢ ೧೫, ಶಕ ವರ್ಷ ೧೯೨೮) | ಸಂಚಿಕೆ ೨೭ |
|---|---|---|


## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಅತ್ಯಂತ ಹಿಂದುಳಿದ ಹಾಗೂ ಅಲೆಮಾರಿ ಜನಾಂಗಗಳ ಅಭಿವೃದ್ಧಿಗೆ ಆರ್ಥಿಕ ನೆರವು ಒದಗಿಸಲು ವಿಶೇಷ ಯೋಜನೆ.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯುಎಲ್ 59 ಬಿಸಿಎ 88, ದಿನಾಂಕ: 16–11–1991.

(2) ವ್ಯವಸ್ಥಾಪಕ ನಿರ್ದೇಶಕರು, ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ, ಬೆಂಗಳೂರು, ಇವರ ಏಕ ಕಡತ ಸಂಖ್ಯೆ : ದೇಹಿನಿ / ಸಿಆರ್–134/2006–07, ದಿನಾಂಕ: 3–5–2006.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 16–11–1991ರ ಸರ್ಕಾರದ ಆದೇಶದಲ್ಲಿ ಹಿಂದುಳಿದ ವರ್ಗಗಳ ಜನರಿಗೆ ಸಾಲ ಮಂಜೂರು ಮಾಡುವ ವಿಧಿ ವಿಧಾನಗಳೊಂದಿಗೆ ಜಿಲ್ಲಾ ಸಮಿತಿಯನ್ನು ರಚಿಸಲಾಗಿದೆ.

ಮೇಲ್ಕಂಡ ಉಲ್ಲೇಖ (2)ರಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಏಕ ಕಡತದಲ್ಲಿ ಪ್ರಸ್ತಾವನೆ ಸಲ್ಲಿಸಿ, ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮವು 1977ರಿಂದ ಹಿಂದುಳಿದ ವರ್ಗಗಳ ಜನರ ಅಭಿವೃದ್ಧಿಗೆ ಆರ್ಥಿಕ ನೆರವನ್ನು ಒದಗಿಸಲಾಗುತ್ತಿದೆ. ಸರ್ಕಾರವು ಆದೇಶ ಸಂಖ್ಯೆ: ಸಕಇ/225/ಬಿ.ಸಿ.ಎ/2002 ದಿನಾಂಕ: 30/3/2002ರಲ್ಲಿನ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಪ್ರವರ್ಗ 1ರಲ್ಲಿ ಬರುವ 1) ಗೋಂಧಳಿ, 2) ಗೋನಿಗ, 3) ಬಾವಾಜಿ, 4) ಬುಡುಬುಡಿಕೆ, 5) ಜೋಗಿ, 6) ಹೆಳವ, 7) ಹಾಲಕ್ಕಿ ಒಕ್ಕಲ್, 8) ಕುಡುಬಿ, 9) ಸುಣಗಾರ, 10) ಹೂಗಾರ, 11) ಬೇಡ, 12) ಸಿದ್ದಿ, 13) ಗೋಸಾಯಿ, 14) ಬೆಸ್ತರು ಇತ್ಯಾದಿ ಜಾತಿ/ಜನಾಂಗಗಳು ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಹಾಗೂ ಶೈಕ್ಷಣಿಕವಾಗಿ ಅತೀ ಹಿಂದುಳಿದ ಜನಾಂಗವಾಗಿರುತ್ತದೆ. ಅಲ್ಲದೆ ಈ ಜಾತಿ/ಜನಾಂಗಗಳು ಅವರ ಜೀವನಾವಶ್ಯಕತೆಗಾಗಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವಲಸೆ ಹೋಗುತ್ತಾ ಜೀವನವನ್ನು ನಡೆಸುತ್ತಿರುವುದನ್ನು ಕಾಣಬಹುದಾಗಿರುತ್ತದೆ. ಆದ್ದರಿಂದ ಇಂತಹ ಜನರನ್ನು ಗುರ್ತಿಸಿ ಅವರಿಗೆ ಉದ್ಯೋಗಕ್ಕಾಗಿ ಅಗತ್ಯವಿರುವ ಆರ್ಥಿಕ ನೆರವನ್ನು ಒದಗಿಸಲು ಹಾಗೂ ಸ್ವಯಂ ಉದ್ಯೋಗ ಕೈಗೊಳ್ಳಲು ಅಗತ್ಯವಿರುವ ಸೂಕ್ತ ತರಬೇತಿಗಳನ್ನು ನೀಡುವ ಅವಶ್ಯಕತೆಯನ್ನು ಮನಗಂಡು ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮವು 2006–07ನೇ ಸಾಲಿನಿಂದಲೇ ಈ ಅಲೆಮಾರಿ ಜಾತಿ/ ಜನಾಂಗಗಳ ಜನರಿಗೆ ಅವರು ಕೈಗೊಳ್ಳುವ ಆರ್ಥಿಕ ಚಟುವಟಿಕೆಗಳು ಮತ್ತು ಅವಶ್ಯಕತೆಗನುಗುಣವಾಗಿ ಸಾಲ ಸೌಲಭ್ಯ ಒದಗಿಸಲು ದಿನಾಂಕ: 07–04–2006ರಂದು ನಡೆದ ನಿಗಮದ ನಿರ್ದೇಶಕ ಮಂಡಳಿ ಸಭೆಯು ಅನುಮೋದಿಸಿರುವಂತೆ ಸರ್ಕಾರವು ಆಯವ್ಯಯದಲ್ಲಿ ನಿಗಮಕ್ಕೆ ಒದಗಿಸುವ ಸಬ್ಸಿಡಿ ಮತ್ತು ಷೇರು ಬಂಡವಾಳದಲ್ಲಿ ಈ ಯೋಜನೆಯನ್ನು 2006–07ನೇ ಸಾಲಿನಿಂದಲೇ ಅನುಷ್ಠಾನಗೊಳಿಸಲು ಕೋರಿರುತ್ತಾರೆ ಹಾಗೂ ಈ ಯೋಜನೆಯ ಕುರಿತು ಕರಡು ನಿಯಮ ಮತ್ತು ಮಾರ್ಗಸೂಚಿಗಳೊಂದಿಗೆ ಪ್ರಸ್ತಾವನೆ ಸಲ್ಲಿಸಿ ಅನುಮತಿ ನೀಡಿ ಆದೇಶ ಹೊರಡಿಸಲು ಕೋರಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಕಇ 180 ಬಿಎಂಎಸ್ 2006, ಬೆಂಗಳೂರು, ದಿನಾಂಕ : 20ನೇ ಮೇ 2006**

ವ್ಯವಸ್ಥಾಪಕ ನಿರ್ದೇಶಕರು, ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಅತ್ಯಂತ ಹಿಂದುಳಿದ ಹಾಗೂ ಅಲೆಮಾರಿ ಜನಾಂಗಗಳ ಅಭಿವೃದ್ಧಿಗೆ ಆರ್ಥಿಕ ನೆರವು ಒದಗಿಸಲು ರೂಪಿಸಿರುವ ಹಾಗೂ ಅನುಬಂಧದಲ್ಲಿ ತಿಳಿಸಿರುವ ಈ ವಿಶೇಷ ಯೋಜನೆಯ ನಿಯಮಗಳು ಮತ್ತು ಮಾರ್ಗಸೂಚಿಗಳನ್ನು ಅನುಮೋದಿಸಿದೆ. ಅದರಂತೆ ಅತ್ಯಂತ ಹಿಂದುಳಿದ ಹಾಗೂ ಅಲೆಮಾರಿ ಜನಾಂಗಗಳ ಅಭಿವೃದ್ಧಿಗೆ ಆರ್ಥಿಕ ನೆರವು ಒದಗಿಸಲು ಈ ವಿಶೇಷ ಯೋಜನೆಯನ್ನು 2006-07ನೇ ಸಾಲಿನಿಂದಲೇ ಅನುಷ್ಠಾನಗೊಳಿಸಲು ಆದೇಶಿಸಿದೆ. ಆಯವ್ಯಯದಲ್ಲಿ ಒದಗಿಸಲಾದ ಷೇರು ಬಂಡವಾಳ ಮತ್ತು ಸಬ್ಸಿಡಿಯನ್ನು ಹೊಂದಾಣಿಕೆ ಮಾಡಿಕೊಂಡು ಕಾರ್ಯಗತಗೊಳಿಸಲು ಆದೇಶಿಸಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು 2006-07ನೇ ಸಾಲಿನಲ್ಲಿ ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮಕ್ಕೆ ಒದಗಿಸಿರುವ ಷೇರು ಬಂಡವಾಳ ಮತ್ತು ಸಹಾಯಾನುದಾನ ಲೆಕ್ಕಶೀರ್ಷಿಕೆಗಳಿಂದ ಭರಿಸತಕ್ಕದ್ದು. ಸರ್ಕಾರದ ಪೂರ್ವಾನುಮತಿ ಪಡೆದು ಮೇಲ್ಕಂಡ ಲೆಕ್ಕಶೀರ್ಷಿಕೆಯಡಿ ಹಣ ಡ್ರಾ ಮಾಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಎಂ.ಚಿದಾನಂದ ಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

**ದಿನಾಂಕ: 20-05-2006ರ ಸರ್ಕಾರದ ಆದೇಶ ಸಂಖ್ಯೆ: ಸಕಇ 180 ಬಿಎಂಎಸ್ 2006ರ ಅನುಬಂಧ**

ಅತ್ಯಂತ ಹಿಂದುಳಿದ ಹಾಗೂ ಅಲೆಮಾರಿ ಜನಾಂಗಗಳ ಅಭಿವೃದ್ಧಿಗೆ ಆರ್ಥಿಕ ನೆರವು ಒದಗಿಸಲು ವಿಶೇಷ ಯೋಜನೆಯ ಅನುಷ್ಠಾನದ ಮಾರ್ಗಸೂಚಿ/ನಿಯಮ ಮತ್ತು ನಿಬಂಧನೆಗಳು.

**1) ಪೀಠಿಕೆ:-**

ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮವು ರಾಜ್ಯದಲ್ಲಿರುವ ಹಿಂದುಳಿದ ವರ್ಗಗಳ ಪ್ರವರ್ಗ-1, 2ಎ, 3ಎ ಮತ್ತು 3ಬಿ ಗೆ ಸೇರಿದ ಜನರ ಆರ್ಥಿಕಾಭಿವೃದ್ಧಿಗೆ ಸರ್ಕಾರವು ಆಯವ್ಯಯದಲ್ಲಿ ಒದಗಿಸುವ ಹಣದಿಂದ ಹಲವಾರು ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಹಿಂದುಳಿದ ವರ್ಗಗಳಲ್ಲಿ ಪ್ರವರ್ಗ 1ರಲ್ಲಿ ಬರುವ ತೀರ ಹಿಂದುಳಿದಿರುವ ಹಾಗೂ ಸ್ವಾಭಾವಿಕವಾಗಿ ಅಲೆಮಾರಿ ಜನಾಂಗಗಳು ಆರ್ಥಿಕವಾಗಿ, ಶೈಕ್ಷಣಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಅತೀ ಹಿಂದುಳಿದಿರುತ್ತವೆ. ಇವರು ಹಿಂದುಳಿದ ವರ್ಗಗಳ ಪಟ್ಟಿಯಲ್ಲಿರುವ ಇತರೆ ಜಾತಿಗಳೊಡನೆ ಸ್ಪರ್ಧಿಸಿ ಸೌಲಭ್ಯ ಪಡೆಯಲು ವಂಚಿತರಾಗುತ್ತಿರುವುದನ್ನು ಗಮನಿಸಿ ಅಂತಹ ಜಾತಿಗಳ ಸಂಘ ಸಂಸ್ಥೆಗಳು ಸಲ್ಲಿಸಿರುವ ಮನವಿಗಳನ್ನು ಪರಿಗಣಿಸಿದೆ. ಈ ಜನಾಂಗಗಳು ಅವರ ಜೀವನ ಅವಶ್ಯಕತೆಗಾಗಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಗಳಿಗೆ ವಲಸೆಹೋಗುತ್ತಾ ಅಲೆಮಾರಿ ಜೀವನವನ್ನು ನಡೆಸುತ್ತಿರುವುದನ್ನು ಕಾಣಬಹುದಾಗಿರುತ್ತದೆ. ಇಂತಹ ಜನರನ್ನು ಗುರ್ತಿಸಿ ಆರ್ಥಿಕ ಸೌಲಭ್ಯ ಒದಗಿಸಿ ಒಂದು ಸ್ಥಳದಲ್ಲಿ ನೆಲೆ ನಿಲ್ಲಲು ಹಾಗೂ ಸೂಕ್ತ ಉದ್ಯೋಗಾವಕಾಶಗಳನ್ನು ಕಲ್ಪಿಸಲು ಮತ್ತು ಅವರ ಸ್ವಯಂ ಉದ್ಯೋಗಕ್ಕಾಗಿ ಸೂಕ್ತ ತರಬೇತಿಗಳನ್ನು ಮತ್ತು ಆರ್ಥಿಕ ನೆರವನ್ನು ಒದಗಿಸಬೇಕಾಗಿರುತ್ತದೆ. ಈ ಮಹೋದ್ದೇಶದಿಂದ ದಿನಾಂಕ: 07-04-2006ರಂದು ನಡೆದ ನಿಗಮದ ನಿರ್ದೇಶಕ ಮಂಡಳಿಯ ಸಭೆಯು ಅತ್ಯಂತ ಹಿಂದುಳಿದ ವರ್ಗಗಳ ಜನರಿಗೆ ವಿಶೇಷ ಯೋಜನೆಯನ್ನು ರೂಪಿಸಿ ಅನುಷ್ಠಾನಗೊಳಿಸಲು ಅನುಮೋದನೆಯನ್ನು ನೀಡಿರುತ್ತದೆ. ಈ ಯೋಜನೆಯ ನಿಯಮ ಮತ್ತು ಷರತ್ತುಗಳು ಈ ಮುಂದಿನಂತಿರುತ್ತವೆ.

**2) ವ್ಯಾಖ್ಯಾನಗಳು:-**

| | | |
|---|---|---|
| ಅ) ಸರ್ಕಾರ | : | ಅಂದರೆ ಕರ್ನಾಟಕ ಸರ್ಕಾರ. |
| ಆ) ಅತೀ ಹಿಂದುಳಿದ ಜನಾಂಗ | : | ಅಂದರೆ ಸರ್ಕಾರದ ಆದೇಶದನ್ವಯ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿರುವ ಅತೀ ಹಿಂದುಳಿದ ಜಾತಿಗೆ ಹಾಗೂ ಸ್ವಾಭಾವಿಕವಾಗಿ ಅಲೆಮಾರಿ ಜನಾಂಗಕ್ಕೆ ಸೇರಿದ 1) ಗೋಂಧಳಿ 2) ಗೋನಿಗ 3) ಭಾವಾಜಿ 4) ಬುಡಬುಡಿಕೆ 5) ಜೋಗಿ 6) ಹೆಳವ 7) ಹಾಲಕ್ಕಿ ಒಕ್ಕಲ್ 8) ಕುಡುಬಿ 9) ಸುಣ್ಣಗಾರ 10) ಹೂಗಾರ 11) ಬೇಡರು 12) ಸಿದ್ದಿ 13) ಗೋಸಾಯಿ 14) ಬೆಸ್ತರು ಇತ್ಯಾದಿ. |
| ಇ) ಜಿಲ್ಲಾ ಸಮಿತಿ ಮತ್ತು ಅಧ್ಯಕ್ಷರು | : | ಅಂದರೆ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಚೈತನ್ಯ ಸಾಫ್ಟ್‌ಲೋನ್ ಕಂ ಸಬ್ಸಿಡಿ ಯೋಜನೆ ಸರ್ಕಾರದ ಆದೇಶ ಸಂಖ್ಯೆ : ಎಸ್‌ಡಬ್ಲ್ಯೂಎಲ್ 59 ಬಿಸಿಎ 88, ದಿನಾಂಕ: 16-11-1991ರಲ್ಲಿ ರಚಿಸಿರುವ ಜಿಲ್ಲಾ ಸಮಿತಿ. |
| ಈ) ನಿಗಮ | : | ಅಂದರೆ 1956ನೇ ಕಂಪನಿ ಕಾಯ್ದೆಯ ಅನ್ವಯ ರಿಜಿಸ್ಟರ್ ಆಗಿರುವ ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು. |
| ಉ) ಅನುಷ್ಠಾನ ಅಧಿಕಾರಿ ಮತ್ತು ಜಿಲ್ಲಾ ಸಮಿತಿಯ ಸದಸ್ಯ ಕಾರ್ಯದರ್ಶಿ. | : | ಜಿಲ್ಲಾ ವ್ಯವಸ್ಥಾಪಕರು ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ. |

ಊ) ಸ್ವಸಹಾಯ ಗುಂಪು : ಅತ್ಯಂತ ಹಿಂದುಳಿದ ವರ್ಗಗಳ/ಅಲೆಮಾರಿ ಜನಾಂಗದವರು ರಚಿಸಿಕೊಂಡು ನಿರ್ವಹಿಸುತ್ತಿರುವ ಸ್ವಸಹಾಯ ಗುಂಪು/ಸ್ತ್ರೀಶಕ್ತಿ ಸಂಘ.

ಋ) ಸಹಕಾರ ಸಂಘ : ಅತ್ಯಂತ ಹಿಂದುಳಿದ ಜನಾಂಗದವರು/ಅಲೆಮಾರಿ ಜನಾಂಗದವರು ಕೋಆಪರೇಟಿವ್ ಆಕ್ಟ್ 1959ರನ್ವಯ ರಚಿಸಿಕೊಂಡಿರುವ ಸಹಕಾರ ಸಂಘ.

3) **ಯೋಜನೆಯ ಉದ್ದೇಶ:–** ಈ ವರ್ಗದ ಜನರು ಜೀವನೋಪಾಯಕ್ಕಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುವುದನ್ನು ತಡೆಗಟ್ಟಿ, ಅವರು ಶಾಶ್ವತವಾಗಿ ಒಂದು ಕಡೆ ನೆಲೆಯೂರಲು ಅವಕಾಶವಾಗುವಂತೆ ಹಾಗೂ ಅವರಿಗೆ ನೈಪುಣ್ಯವಿರುವ ಆರ್ಥಿಕ ಚಟುವಟಿಕೆಗಳಿಗೆ ನಿಗಮದಿಂದ ಕಡಿಮೆ ಬಡ್ಡಿದರದಲ್ಲಿ ನೇರವಾಗಿ ಅಗತ್ಯವಿರುವ ಸಹಾಯಧನ/ಸಾಲ ಸೌಲಭ್ಯವನ್ನು (Need Based) ಒದಗಿಸುವುದು ಯೋಜನೆಯ ಉದ್ದೇಶವಾಗಿರುತ್ತದೆ.

4. **ಅರ್ಹತೆ:–**

(ಅ) ಈ ಯೋಜನೆಯಲ್ಲಿ ಆರ್ಥಿಕ ಸಹಾಯ ಪಡೆಯಲು ದಿನಾಂಕ: 30–03–2002ರ ಸರ್ಕಾರಿ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಡಿ/225/ಬಿ.ಸಿ.ಎ/2000 ಆದೇಶದಲ್ಲಿ ಗುರ್ತಿಸಿದ ಅಥವಾ ಸರ್ಕಾರವು ಕಾಲಕಾಲಕ್ಕೆ ಗುರ್ತಿಸಿ ಅಂಗೀಕರಿಸಿದ ಹಿಂದುಳಿದ ವರ್ಗಗಳ ಪ್ರವರ್ಗ–1ರಲ್ಲಿ ಬರುವ ಅಲೆಮಾರಿಯಾಗಿರುವ ಅತೀ ಹಿಂದುಳಿದ ಜಾತಿಗಳಾದ 1) ಗೋಂಧಳಿ 2) ಗೋನಿಗ 3) ಭಾವಾಜಿ 4) ಬುಡಬುಡಿಕೆ 5) ಜೋಗಿ 6) ಹೆಳವ 7) ಹಾಲಕ್ಕಿ ಒಕ್ಕಲ್ 8) ಕುಡುಬಿ 9) ಸುಣ್ಣಗಾರ 10) ಹೂಗಾರ 11) ಬೇಡರು 12) ಸಿದ್ದಿ 13) ಗೋಸಾಯಿ 14) ಬೆಸ್ತರು ಇಂತಹ ಇತ್ಯಾದಿ ಅತೀ ಹಿಂದುಳಿದ ವರ್ಗಕ್ಕೆ ಸೇರಿದ ಅಲೆಮಾರಿ ಜನಾಂಗದವರಾಗಿರಬೇಕು.

(ಆ) ಅರ್ಜಿದಾರರ ಕುಟುಂಬದ ವಾರ್ಷಿಕ ವರಮಾನ 22,000/– ರೂ.ಗಳಿಗಿಂತ ಕಡಿಮೆ ಇರಬೇಕು.

(ಇ) ಕರ್ನಾಟಕ ರಾಜ್ಯದಲ್ಲಿ ಕನಿಷ್ಠ 15 ವರ್ಷ ವಾಸವಾಗಿರಬೇಕು.

(ಈ) ಅರ್ಜಿದಾರರ ವಯಸ್ಸು ಕನಿಷ್ಟ 18 ವರ್ಷಗಳು ಹಾಗೂ ಗರಿಷ್ಟ 55 ವರ್ಷಗಳ ವಯೋಮಿತಿಯೊಳಗಿರಬೇಕು.

(ಉ) ಸರ್ಕಾರದ ಬೇರೆ ಯಾವುದಾದರೂ ಯೋಜನೆಯಲ್ಲಿ ಸಾಲ ಅಥವಾ ಇತರ ಆರ್ಥಿಕ ಸವಲತ್ತು ಪಡೆದಿರಬಾರದು.

(ಋ) ಯೋಜನೆಯಲ್ಲಿ ಶೇ. 33ರಷ್ಟನ್ನು ಮಹಿಳೆಯರಿಗೆ ಮೀಸಲು ಇರುತ್ತದೆ. ವಿಧವೆಯರಿಗೆ / ಪರಿತ್ಯಕ್ತೆಯರಿಗೆ ವಿಶೇಷ ಆದ್ಯತೆ ನೀಡುವುದು.

(ೠ) ಈ ಯೋಜನೆಯಲ್ಲಿ ಶೇಕಡ 5%ರಷ್ಟು ಅಂಗವಿಕಲರಿಗೆ ಕಡ್ಡಾಯವಾಗಿ ಸೌಲಭ್ಯ ಒದಗಿಸಬೇಕು.

(ಎ) ಯೋಜನೆಯ ಫಲವನ್ನು ಒಬ್ಬ ವ್ಯಕ್ತಿಗೆ ಅಥವಾ ಸ್ವ ಸಹಾಯ ಗುಂಪುಗಳ ಮೂಲಕ ಮತ್ತು ಸಹಕಾರ ಸಂಘಗಳ ಮೂಲಕ ಗುಂಪು ಚಟುವಟಿಕೆಗಾಗಿ ಸಾಲ ನೀಡಬಹುದಾಗಿದೆ. ಈ ಯೋಜನೆಯನ್ನು ಎನ್.ಜಿ.ಓ.ಗಳ ಮೂಲಕವೂ ಸಹ ಅನುಷ್ಠಾನಗೊಳಿಸಬಹುದಾಗಿದೆ.

(ಏ) ಈ ಯೋಜನೆಯಲ್ಲಿ ಸಾಲ ಪಡೆಯಬಯಸುವ ಅರ್ಜಿದಾರರು ತನ್ನ ಆರ್ಥಿಕಾಭಿವೃದ್ಧಿಗೆ ಯಾವುದಾದರೂ ಆರ್ಥಿಕ ಚಟುವಟಿಕೆಯನ್ನು ನಿರ್ವಹಿಸುತ್ತಿರಬೇಕು.

5. **ಅರ್ಜಿಯೊಂದಿಗೆ ಸಲ್ಲಿಸಬೇಕಾದ ದಾಖಲಾತಿಗಳು:–** ಅತಿ ಹಿಂದುಳಿದ ವರ್ಗಗಳಿಗೆ ಸೇರಿದ ಅರ್ಜಿದಾರರು ನಿಗಮವು ನೇರ ಸಾಲ ಯೋಜನೆಗೆ ನಿಗದಿಪಡಿಸಿದ ದ್ವಿಪ್ರತಿಯಲ್ಲಿರುವ ಅರ್ಜಿ ನಮೂನೆಯಲ್ಲಿ ವಿವರಗಳನ್ನು ಭರ್ತಿ ಮಾಡಿ ಈ ಕೆಳಕಂಡ ದಾಖಲಾತಿಗಳೊಂದಿಗೆ ಅರ್ಜಿಗಳನ್ನು ಜಿಲ್ಲಾ ಸಮಿತಿಗೆ ಸಲ್ಲಿಸಬೇಕು.

(1) ಹಿಂದುಳಿದ ವರ್ಗಕ್ಕೆ ಸೇರಿರುವುದಕ್ಕೆ ಸಂಬಂಧಿಸಿದ ತಾಲ್ಲೂಕು ತಹಶೀಲ್ದಾರ್‌ರವರಿಂದ ನಿಗದಿತ ನಮೂನೆಯಲ್ಲಿ ಪಡೆದ ಜಾತಿ ಪ್ರಮಾಣ ಪತ್ರ ಮತ್ತು ಅರ್ಜಿದಾರರ ಕುಟುಂಬದ ವಾರ್ಷಿಕ ವರಮಾನ ಪ್ರಮಾಣ ಪತ್ರ.

(2) ಅರ್ಜಿದಾರರು ವಾಸಿಸುತ್ತಿರುವ ವಿಳಾಸದ ಪುರಾವೆಗಾಗಿ ಪಡಿತರ ಚೀಟಿ/ಫೋಟೋ ಗುರುತಿನ ಚೀಟಿ/ವಾಸಸ್ಥಳ ದೃಢೀಕರಣ ಪತ್ರ.

(3) ಅರ್ಜಿದಾರರ ಪಾಸ್‌ಪೋರ್ಟ್ ಅಳತೆಯ ಇತ್ತೀಚಿನ 5 ಫೋಟೋಗಳು. (ದ್ವಿಪ್ರತಿಯಲ್ಲಿರುವ ಅರ್ಜಿಗೆ ತಲಾ ಒಂದೊಂದು, ಸಾಲದ ಖಾತಾ ಪುಸ್ತಕಕ್ಕೆ ಒಂದು ಹಾಗೂ ಸಾಲದ ದಸ್ತಾವೇಜು ಹಾಗೂ ಪಾಸ್ ಪುಸ್ತಕಕ್ಕೆ ಒಂದೊಂದು).

(4) ಅರ್ಜಿದಾರರು ಸ್ಥಳೀಯ ಬ್ಯಾಂಕ್/ಹಣಕಾಸು ಸಂಸ್ಥೆಗಳಲ್ಲಿ ಸಾಲ ಹೊಂದಿಲ್ಲದಿರುವುದಕ್ಕೆ/ಸುಸ್ತಿದಾರರಲ್ಲವೆಂಬುದಕ್ಕೆ ಬೇಬಾಕಿ ಪ್ರಮಾಣ ಪತ್ರ.

(5) ಅರ್ಜಿದಾರರು ಪಡೆಯುವ ಸಾಲಕ್ಕೆ ಸಾಲ ತೀರಿಸುವ ಸಾಮರ್ಥ್ಯವುಳ್ಳ ಒಬ್ಬ ಜಾಮೀನುದಾರನಿಂದ ಒಪ್ಪಿಗೆ ಪತ್ರ ಹಾಗೂ ಪಾಸ್ ಪೋರ್ಟ್ ಸೈಜ್ ಫೋಟೋ 2.

(6) ಅರ್ಜಿದಾರರ ಮತ್ತು ಜಾಮೀನುದಾರರ ಆಸ್ತಿ ಮತ್ತು ಋಣಭಾರದ ಘೋಷಣೆ.

6) **ಸಾಲ ನೀಡಲು ಗುರುತಿಸಲಾದ ಆರ್ಥಿಕ ಚಟುವಟಿಕೆಗಳು:**

(1) ಕೌದಿ ಹೊಲೆಯುವುದು. (2) ಪಾತ್ರೆ ವ್ಯಾಪಾರ.
(3) ಹೈನುಗಾರಿಕೆ. (4) ಸಂಚಾರಿ/ಸಂತೆ ವ್ಯಾಪಾರ.
(5) ಗಿಡಮೂಲಿಕೆಗಳ ಸಂಗ್ರಹಣೆ ಮತ್ತು ವೈದ್ಯೋಪಚಾರ. (6) ಸುಣ್ಣ ಸುಡುವಿಕೆ.
(7) ಹಂದಿ ಸಾಕಾಣಿಕೆ. (8) ಮೊಲ ಸಾಕಾಣಿಕೆ.
(9) ಸಣ್ಣ ವ್ಯಾಪಾರ. (10) ಹೂವು ಮಾರಾಟ.
(11) ಅತೀ ಹಿಂದುಳಿದ ವರ್ಗದವರು ಅವರ ಆರ್ಥಿಕಾಭಿವೃದ್ಧಿಗೆ ಕೈಗೊಳ್ಳುವ ಇನ್ನಿತರ ಆದಾಯ ತರುವಂತಹ ಚಟುವಟಿಕೆಗಳು.

**7. ಘಟಕ ವೆಚ್ಚ– ಸಾಲದ ಮೊತ್ತ ಮತ್ತು ಸಹಾಯ ಧನ:–**

(ಅ) ವಿಶೇಷ ಆರ್ಥಿಕ ನೆರವು ಯೋಜನೆಗೆ ಒಳಪಡುವ ಅತೀ ಹಿಂದುಳಿದ/ಅಲೆಮಾರಿ ಜಾತಿಯ ಜನರು ಅವರು ಕೈಗೊಳ್ಳುವ ಉದ್ದೇಶಗಳಿಗಾಗಿ ಆರ್ಥಿಕ ನೆರವನ್ನು ಆಯಾ ಪ್ರದೇಶ ಹಾಗೂ ಅರ್ಜಿದಾರರ ಕೈಗೊಳ್ಳುವ ಚಟುವಟಿಕೆ ಮತ್ತು ಸಾಮರ್ಥ್ಯಕ್ಕನುಗುಣವಾಗಿ ಗರಿಷ್ಠ 15000/–ರೂ.ಗಳ ಸಾಲ ಮತ್ತು ಸಹಾಯಧನ ನೀಡಲಾಗುವುದು. ಯೋಜನೆಗಳು ಆರ್ಥಿಕ ಸಮಂಜಸತೆ ಲಾಭದಾಯಕತೆ ಹಾಗೂ ಮಾರುಕಟ್ಟೆಯ ವ್ಯವಸ್ಥೆಯನ್ನು ಪರಿಗಣನೆಗೆ ತೆಗೆದುಕೊಂಡು ಆಯಾ ಘಟಕ ವೆಚ್ಚಕ್ಕೆ ಅಗತ್ಯವಿರುವ ಪೂರ್ಣ ಹಣವನ್ನು ನೇರಸಾಲವಾಗಿ ನೀಡಲಾಗುತ್ತದೆ. ಆಯಾ ಘಟಕ ವೆಚ್ಚಕ್ಕೆ ಅನುಗುಣವಾಗಿ ಶೇ.50 ಅಥವಾ ಗರಿಷ್ಟ 5000/– ರೂ. ಸಹಾಯಧನವನ್ನು/ಸಬ್ಸಿಡಿ ನೀಡಲಾಗುತ್ತದೆ. ಸಾಲವನ್ನು ನಿಗದಿತ 5 ವರ್ಷ ಅವಧಿಯಲ್ಲಿ ಬಡ್ಡಿಸಹಿತ ಮರುಪಾವತಿಸಬೇಕು.

(ಆ) (1) ಈ ಜಾತಿಯ ಜನರು ಸಂಘಟಿಸಿ ನಡೆಸುತ್ತಿರುವ ಪ್ರತಿ ಸ್ವ–ಸಹಾಯ ಗುಂಪಿನ ಗರಿಷ್ಠ 10 ಜನರಿಗೆ ಘಟಕ ವೆಚ್ಚ ಆಧರಿಸಿ ಯೋಜನೆಗೆ ತಕ್ಕಂತೆ ಅಥವಾ ಪ್ರತಿ ವ್ಯಕ್ತಿಗೆ ಗರಿಷ್ಠ 15,000/–ರೂ.ಗಳು ಮೀರದಂತೆ ಒಂದು ಗುಂಪಿಗೆ ಗರಿಷ್ಠ 1.50 ಲಕ್ಷ ರೂ.ಗಳನ್ನು ಮಂಜೂರು ಮಾಡಲಾಗುತ್ತದೆ.

(2) ಈ ಪ್ರವರ್ಗಕ್ಕೆ ಸೇರಿದ ಜಾತಿ/ಜನಾಂಗಗಳ ಜನರು ಸ್ಥಾಪಿಸಿ ನಡೆಸುತ್ತಿರುವ ಸಹಕಾರ ಸಂಘಗಳ ಮೂಲಕ ಗುಂಪಿಗೆ ಚಟುವಟಿಕೆಗಳಿಗೆ ಗರಿಷ್ಠ 20 ಜನರಿಗೆ ಚಟುವಟಿಕೆಗಳನ್ನಾಧರಿಸಿ ಪ್ರತಿ ವ್ಯಕ್ತಿಗೆ ಗರಿಷ್ಠ 15,000/– ರೂ.ಗಳು ಮೀರದಂತೆ ಗುಂಪಿಗೆ ಸಹಕಾರ ಸಂಘದ ಮೂಲಕ ಗರಿಷ್ಠ 3.00 ಲಕ್ಷ ರೂ.ಗಳನ್ನು ಮಂಜೂರು ಮಾಡಬಹುದಾಗಿರುತ್ತದೆ.

ಈ ಮೇಲಿನ ಎರಡೂ ಪ್ರಕರಣಗಳಲ್ಲೂ ಸಹಾಯಧನದ ಮೊತ್ತವು ಪ್ರತಿ ಫಲಾನುಭವಿಗೆ ಶೇ. 50 ಭಾಗ ಅಥವಾ ಗರಿಷ್ಟ ತಲಾ ರೂ. 5000/– ಮಂಜೂರು ಮಾಡುವುದು.

(3) ಸಹಕಾರ ಸಂಘಗಳಿಗೆ ಸಾಲ ಮಂಜೂರು ಮಾಡುವಾಗ ಆ ಸಂಸ್ಥೆಗಳು ಪ್ರಾರಂಭವಾಗಿ ಕನಿಷ್ಠ 3 ವರ್ಷಗಳಾಗಿರಬೇಕು, ಲಾಭದಲ್ಲಿ ನಡೆಯುತ್ತಿರಬೇಕು ಮತ್ತು ಆಡಿಟ್ ವರದಿಯಲ್ಲಿ ಯಾವುದೇ ರೀತಿಯ ಆಕ್ಷೇಪಣೆಗಳಿರಬಾರದು.

(4) ಈ ಜನಾಂಗಗಳು ರಚಿಸಿರುವ ಸ್ವಸಹಾಯ ಗುಂಪು/ಸ್ತ್ರೀ ಶಕ್ತಿ ಗುಂಪುಗಳಿಗೆ ಸಾಲ ಮಂಜೂರು ಮಾಡುವಾಗ ಅವುಗಳು ಕಾರ್ಯನಿರ್ವಹಿಸುತ್ತಿರುವ ಲೆಕ್ಕಪತ್ರಗಳು ಮತ್ತು ಅವುಗಳು ಕೈಗೊಳ್ಳುವ ಕಾರ್ಯಚಟುವಟಿಕೆಗಳನ್ನಾಧರಿಸಿ ಉತ್ತಮವಾಗಿ ಕಾರ್ಯ ನಿರ್ವಹಿಸುವ ಹಾಗೂ ಮರುಪಾವತಿಗೆ ಖಾತ್ರಿ ನೀಡುವ ಸ್ವಸಹಾಯ ಗುಂಪುಗಳ ಮೂಲಕ ಮಾತ್ರ ಸಾಲ ಮಂಜೂರು ಮಾಡಬೇಕು.

(5) ನಿಯಮಾನುಸಾರ ಕ್ರಮಬದ್ಧವಾಗಿ ಕಾರ್ಯ ನಿರ್ವಹಿಸುತ್ತಿರುವ ಆರ್ಥಿಕವಾಗಿ ಸದೃಢವಾಗಿ ಕಾರ್ಯ ನಿರ್ವಹಿಸುತ್ತಿರುವ ಹಾಗೂ ಸಾಲವನ್ನು ಫಲಾನುಭವಿಗಳಿಂದ ವಸೂಲು ಮಾಡಿ ನಿಗಮಕ್ಕೆ ಸಂದಾಯ ಮಾಡಲು ನಿಗದಿತ ನಮೂನೆಯಲ್ಲಿ ಕರಾರು ಒಪ್ಪಂದಕ್ಕೆ ಸಹಿ ಮಾಡಿಕೊಡುವಂತಹ ಸ್ವ–ಸಹಾಯ ಗುಂಪುಗಳು/ಸಹಕಾರ ಸಂಘಗಳನ್ನು ಮಾತ್ರ ಪರಿಗಣಿಸಲಾಗುತ್ತದೆ.

(6) ಸಾಲ ಮಂಜೂರಾದ ಎಲ್ಲಾ ಫಲಾನುಭವಿಗಳಿಗೆ ಕಡ್ಡಾಯವಾಗಿ ಸಾಲ ವಿತರಣಾ ಪೂರ್ವ ಸಮಾಲೋಚನೆ ಏರ್ಪಡಿಸಿ ಸಾಲದ ಉಪಯುಕ್ತತೆ, ಸದುಪಯೋಗ, ಮರುಪಾವತಿ ಮತ್ತು ಅವಶ್ಯಕ ವಿಮೆಗಳ ಬಗ್ಗೆ ಹಾಗೂ ಘಟಕಗಳನ್ನು ಸ್ಥಾಪಿಸಿ ನಿರ್ವಹಿಸುವ ಬಗ್ಗೆ ಸವಿವರವಾದ ತಿಳುವಳಿಕೆ ನೀಡಬೇಕು.

(7) ಫಲಾನುಭವಿಗಳಿಗೆ ಅವರು ಕೈಗೊಳ್ಳುವ ಆರ್ಥಿಕ ಚಟುವಟಿಕೆಗಳನ್ನಾಧರಿಸಿ ಜಿಲ್ಲೆಯಲ್ಲಿರುವ ಉತ್ತಮ ತರಬೇತಿ ಸಂಸ್ಥೆಗಳ ಸಹಯೋಗದೊಂದಿಗೆ ಕಡ್ಡಾಯವಾಗಿ ಉದ್ಯಮಶೀಲತಾ ತರಬೇತಿಯನ್ನು ಒದಗಿಸಬೇಕು.

**8. ಬಡ್ಡಿಯ ದರ, :–** ಈ ಯೋಜನೆಯಲ್ಲಿ ಕೊಡುವ ಸಾಲಕ್ಕೆ ವಾರ್ಷಿಕ ಶೇ. 4ರಂತೆ ಸರಳ ಬಡ್ಡಿಯನ್ನು ವಿಧಿಸಲಾಗುತ್ತದೆ.

**9. ಸುಸ್ತಿ ಬಡ್ಡಿ :** ನಿಗದಿತ ಕಂತುಗಳ ಅನ್ವಯ ಮರುಪಾವತಿ ಮಾಡದಿದ್ದರೆ ಬಾಕಿಯಾಗುವ/ ಸುಸ್ತಿಯಾಗುವ ಸಾಲದ ಕಂತುಗಳ ಮೊತ್ತಕ್ಕೆ ವಾರ್ಷಿಕ ಶೇ.2ರಷ್ಟು ಸುಸ್ತಿ ಬಡ್ಡಿಯನ್ನು ವಿಧಿಸಲಾಗುತ್ತದೆ.

10. ಮರುಪಾವತಿ ಅವಧಿ: ಮರುಪಾವತಿ ಅವಧಿಯು ಗರಿಷ್ಠ 5 ವರ್ಷ. ಸಾಲ ಬಿಡುಗಡೆಯಾದ ದಿನಾಂಕದಿಂದ 2 ತಿಂಗಳ ವಿರಾಮಾವಧಿಯನ್ನು ನೀಡಲಾಗುತ್ತದೆ ಹಾಗೂ ನಂತರ 58 ತಿಂಗಳ ಅವಧಿಯಲ್ಲಿ ಮಾಸಿಕ ಕಂತುಗಳಲ್ಲಿ ಸಾಲವನ್ನು ಫಲಾನುಭವಿಗಳು ಮರುಪಾವತಿಸಬೇಕು.

**11. ಜಿಲ್ಲಾ ಸಮಿತಿ:–**

ಈ ಯೋಜನೆಯಲ್ಲಿ ಸೌಲಭ್ಯ ಪಡೆಯುವ ಫಲಾನುಭವಿಗಳ ಆಯ್ಕೆಯನ್ನು ಜಿಲ್ಲಾ ಸಮಿತಿ ಆಯ್ಕೆ ಮಾಡಲಾಗುತ್ತದೆ. ಈ ಆಯ್ಕೆ ಪ್ರಕ್ರಿಯೆಗಾಗಿ ಮತ್ತು ಯೋಜನೆಯ ಅನುಷ್ಟಾನಕ್ಕಾಗಿ ಎಲ್ಲಾ ಜಿಲ್ಲೆಗಳಲ್ಲಿ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಹಣಾಧಿಕಾರಿಯವರ ಅಧ್ಯಕ್ಷತೆಯಲ್ಲಿ ಜಿಲ್ಲಾ ಸಮಿತಿಯನ್ನು ರಚಿಸಲಾಗಿರುತ್ತದೆ. ಈ ಸಮಿತಿಗಳು ಜಿಲ್ಲಾ ಮಟ್ಟದ ನಿಗಮದ ಘಟಕವಾಗಿ ಕಾರ್ಯನಿರ್ವಹಿಸುತ್ತವೆ.

**12. ಫಲಾನುಭವಿಗಳ ಆಯ್ಕೆ ಮತ್ತು ಸಾಲ ಮಂಜೂರಾತಿಯ ವಿಧಾನ:–**

(1) ಜಿಲ್ಲಾ ಸಮಿತಿಯ ಸದಸ್ಯ ಕಾರ್ಯದರ್ಶಿಗಳು ಜಿಲ್ಲಾ ಮಟ್ಟದಲ್ಲಿ ಆಯಾಯ ಆರ್ಥಿಕ ವರ್ಷಕ್ಕೆ ನೀಡುವ ಗುರಿಯನ್ವಯ ವೃತ್ತಪತ್ರಿಕೆಗಳಲ್ಲಿ ಯೋಜನೆಯ ಮಾಹಿತಿ ನೀಡಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸುವುದು.

(2) ಜಿಲ್ಲಾ ಸಮಿತಿ ಕಾರ್ಯದರ್ಶಿಯವರು ಸ್ವೀಕರಿಸಲಾದ ಅರ್ಜಿಗಳನ್ನು ಕಾಲಾನುಕ್ರಮಣಿಕೆಯಲ್ಲಿ ದಾಖಲಿಸಿಕೊಂಡ ನಂತರ ಆ ಎಲ್ಲಾ ಅರ್ಜಿಗಳನ್ನು ಪರಿಶೀಲಿಸಿ ಗ್ರಾಮ ಪಂಚಾಯತ್‌ವಾರು ಪಟ್ಟಿ ಮಾಡಿಕೊಳ್ಳುವುದು. ಸ್ವೀಕರಿಸಲಾದ ಅರ್ಜಿಗಳಲ್ಲಿ ಆ ಅರ್ಜಿದಾರರ ಕೌಟುಂಬಿಕ ಹಿನ್ನಲೆ, ಅರ್ಜಿದಾರರ ಕಾರ್ಯ ನಿರ್ವಹಣೆಯ ಹಿನ್ನೆಲೆಯ ಪರಿಶೀಲನೆ,

ಅವರು ಈಗಾಗಲೇ ಸಾಲ ಪಡೆದಿದ್ದಾರೆಯೇ ಇಲ್ಲವೇ ಎಂಬುದರ ಬಗ್ಗೆ ಮಾಹಿತಿ ಸಂಗ್ರಹಣೆ, ಅರ್ಜಿದಾರರು ಕೈಗೊಳ್ಳುವ/ ಆರ್ಥಿಕ ಚಟುವಟಿಕೆ ಪರಿಣಿತಿ/ತರಬೇತಿ, ಅವರ ಆರ್ಥಿಕ ಸ್ಥಿತಿಗತಿ, ಮಾರುಕಟ್ಟೆಯ ವ್ಯವಸ್ಥೆ ಇತ್ಯಾದಿ ಎಲ್ಲಾ ಅಂಶಗಳನ್ನು ಪರ್ಯಾಲೋಚಿಸಿ ಅರ್ಹ ಫಲಾನುಭವಿಗಳ ಪ್ರಸ್ತಾವನೆಗಳನ್ನು/ ಅರ್ಜಿಗಳ ಪಟ್ಟಿಯನ್ನು ಮತ್ತು ಮಂಜೂರು ಮಾಡಬಹುದಾದ ಸಾಲದ ಮೊತ್ತದ ವಿವರಗಳೊಂದಿಗೆ ಪ್ರಸ್ತಾವನೆಗಳನ್ನು ಜಿಲ್ಲಾ ಸಮಿತಿಯ ಮುಂದೆ ಮಂಡಿಸುವುದು.

(3) ಜಿಲ್ಲಾ ಸಮಿತಿಯು ಅರ್ಜಿದಾರರು ಕೈಗೊಳ್ಳುವ ಆರ್ಥಿಕ ಚಟುವಟಿಕೆಗಳನ್ನು ಆಧರಿಸಿ ಅಗತ್ಯವಿರುವ ಸಾಲವನ್ನು ಮಾತ್ರ ಮಂಜೂರಾತಿ ನೀಡಿ ಅನುಮೋದಿಸಿದ ಪ್ರಸ್ತಾವನೆಯನ್ನು ನಿಗಮದ ಕೇಂದ್ರ ಕಚೇರಿಗೆ ಕಳುಹಿಸುವುದು. ಈ ಪ್ರಸ್ಥಾವನೆಯನ್ನು ಕೇಂದ್ರ ಕಚೇರಿಯಲ್ಲಿ ಪರಿಶೀಲಿಸಿ ಸಾಲವನ್ನು ಮಂಜೂರು ಮಾಡಿ ಜಿಲ್ಲಾ ಕಚೇರಿಗೆ ಬಿಡುಗಡೆ ಮಾಡುವುದು.

(4) ಕೇಂದ್ರ ಕಚೇರಿಯಿಂದ ಮಂಜೂರು ಮಾಡಿ ಬಿಡುಗಡೆ ಮಾಡಿದ ಸಾಲದ ಮೊತ್ತಕ್ಕನುಗುಣವಾಗಿ ಫಲಾನುಭವಿಗಳಿಂದ ಈ ಕೆಳಕಂಡ ದಸ್ತಾವೇಜುಗಳನ್ನು ಜಿಲ್ಲಾ ವ್ಯವಸ್ಥಾಪಕರು ಪಡೆದು ಸಾಲದ ಚೆಕ್‌ಗಳನ್ನು ಪಾರದರ್ಶಕವಾಗಿ ಜನಪ್ರತಿನಿಧಿಗಳ ಮೂಲಕ ವಿತರಿಸುವುದು.

**13. ಸಾಲದ ದಸ್ತಾವೇಜುಗಳು:–**

(1) ಮಂಜೂರು ಮಾಡಿ ಬಿಡುಗಡೆ ಮಾಡಿದ ಸಾಲದ ಮೊತ್ತಕ್ಕೆ ಪ್ರತಿ ಫಲಾನುಭವಿಯಿಂದ ಹಾಗೂ ಜಾಮೀನುದಾರರಿಂದ ಈ ಕೆಳಗೆ ತಿಳಿಸಿರುವ ದಸ್ತಾವೇಜುಗಳನ್ನು ಜಿಲ್ಲಾ ವ್ಯವಸ್ಥಾಪಕರು ಪಡೆದುಕೊಳ್ಳಬೇಕು ಹಾಗೂ ಅವುಗಳನ್ನು ಅರ್ಜಿದಾರರ ಹಾಗೂ ಜಾಮೀನುದಾರರ ಮಾಹಿತಿಯನ್ನು ನಿಗದಿತ ಅಂಕಣಗಳಲ್ಲಿ ಭರ್ತಿ ಮಾಡಿ ಅವರ ಸಹಿ ಪಡೆದುಕೊಳ್ಳಬೇಕು. ಸಾಲಕ್ಕೆ ಪಡೆಯಲಾದ ದಸ್ತಾವೇಜುಗಳನ್ನು ಜಿಲ್ಲಾ ಕಛೇರಿಯಲ್ಲಿ ಸಾಲ ತೀರುವವರೆಗೆ ಸುರಕ್ಷಿತವಾಗಿ ಸಂರಕ್ಷಿಸಿಟ್ಟಿರಬೇಕು.

ಅ. ಪ್ರಾಮಿಸರಿ ನೋಟ್
ಆ. ಡಿ.ಪಿ.ನೋಟ್ ಡೆಲಿವರಿ ಲೆಟರ್
ಇ. ಲೆಟರ್ ಆಫ್ ರೀಪೇಮೆಂಟ್
ಈ. ಹೈಪಾಥೀಕೇಷನ್ ಡೀಡ್
} ಸಾಲಗಾರರು

ಉ. ಲೆಟರ್ ಆಫ್ ಗ್ಯಾರಂಟಿ (ಜಾಮೀನುದಾರರು)

ಊ. ಮೆಮೊರ್ಯಾಂಡಮ್ ಆಫ್ ಅಗ್ರಿಮೆಂಟ್ ಜಾತಿವಾರು ಸಹಕಾರ ಸಂಘಗಳು / ಎನ್.ಜಿ.ಓ. / ಸ್ವ–ಸಹಾಯ ಗುಂಪುಗಳಿಂದ)

**14. ಸಾಲ ಮರುಪಾವತಿ:–**

(ಅ) ಸಾಲ ಮಂಜೂರು ಮಾಡಿ ಬಿಡುಗಡೆ ಮಾಡಿದ ಸಾಲದ ಮೊತ್ತವನ್ನು ನಿಗದಿತ ಕಂತುಗಳಲ್ಲಿ ಫಲಾನುಭವಿಯು ಗರಿಷ್ಠ 5 ವರ್ಷಗಳ ಒಳಗೆ ಮರುಪಾವತಿಸಬೇಕು. ಸಾಲ ಬಿಡುಗಡೆಯಾದ ನಂತರ ಘಟಕ ಸ್ಥಾಪಿಸಿ ನಡೆಸಲು ಸ್ವಲ್ಪ ಕಾಲಾವಕಾಶ ಬೇಕಾದುದರಿಂದ 2 ತಿಂಗಳ ವಿರಾಮಾವಧಿಯನ್ನು ನೀಡಲಾಗುತ್ತದೆ. ನಂತರ ಸಾಲ ಬಿಡುಗಡೆಯಾದ 3ನೇ ತಿಂಗಳಿನಿಂದ ಮರುಪಾವತಿಯು ಪ್ರಾರಂಭವಾಗುತ್ತದೆ. ಒಟ್ಟು 5 ವರ್ಷಗಳ ಒಳಗೆ ಸಾಲ ಪಡೆದ ದಿನಾಂಕದಿಂದ ಪೂರ್ಣ ಸಾಲವನ್ನು ಬಡ್ಡಿಯ ಸಮೇತ ಮರುಪಾವತಿಸಬೇಕು. 2 ತಿಂಗಳು ವಿರಾಮಾವಧಿ ಕಳೆದು 58 ಸಮನಾದ ಕಂತುಗಳಲ್ಲಿ ಸಾಲವನ್ನು ಮರುಪಾವತಿಸಬೇಕು. ಫಲಾನುಭವಿಯು ಮರುಪಾವತಿ ಮಾಡಬೇಕಾದ ಪ್ರತಿ ಕಂತಿನ ಸಾಲದ ಅಸಲು ಮತ್ತು ಬಡ್ಡಿಯನ್ನು ಲೆಕ್ಕೀಕರಿಸಿ ಸಾಲ ಮಂಜೂರಾತಿ ಆದೇಶದಲ್ಲಿ ತಿಳಿಸಬೇಕು.

(ಆ) ನಿಗದಿಪಡಿಸಿದ ಕಂತಿನನ್ವಯ ಅಸಲು ಮತ್ತು ಬಡ್ಡಿಯನ್ನು ಪ್ರತಿ ತಿಂಗಳು 5ನೇ ತಾರೀಖಿನೊಳಗೆ ಮರುಪಾವತಿಸಬೇಕು. ಈ ದಿನಾಂಕದ ನಂತರವು ಸಾಲ ಮರುಪಾವತಿಸದೆ ಬಾಕಿ ಬೀಳುವ ಕಂತಿನ/ಕಂತುಗಳ ಸಾಲದ ಮೊತ್ತಕ್ಕೆ ವಾರ್ಷಿಕ ಶೇ. 2ರಷ್ಟು ಸುಸ್ತಿ ಬಡ್ಡಿಯನ್ನು ವಿಧಿಸಬೇಕು.

(ಇ) ನಿಗದಿತ ಕಂತುಗಳನ್ವಯ ಫಲಾನುಭವಿಯು ಸಾಲವನ್ನು ಮರುಪಾವತಿ ಮಾಡದೇ ಸುಸ್ತಿಯಾದ್ದಲ್ಲಿ ಕಾಲಾನುಕ್ರಮವಾಗಿ ಫಲಾನುಭವಿಗೆ ಹಾಗೂ ಜಾಮೀನುದಾರರಿಗೆ ನೋಟೀಸ್ ಜಾರಿ ಮಾಡಿ ಸಾಲ ಮರುಪಾವತಿಸುವಂತೆ ಸೂಕ್ತ ತಿಳುವಳಿಕೆ ನೀಡಬೇಕು. ಆದಾಗ್ಯೂ ಸಾಲ ಮರುಪಾವತಿಸದಿದ್ದಲ್ಲಿ ಬಾಕಿಯಿರುವ ಸಾಲದ ಮೊತ್ತವನ್ನು ವಸೂಲು ಮಾಡಲು ಘಟಕವನ್ನು ವಶಕ್ಕೆ ಪಡೆಯಬೇಕು ಹಾಗೂ ನಿಯಮಾನುಸಾರ ಕಾನೂನು ಕ್ರಮ ಕೈಗೊಳ್ಳುವುದು ಅಥವಾ KPMR Act ಅನ್ವಯ ಸಾಲ ವಸೂಲಾತಿಗೆ ಅರ್ಜಿದಾರರು ಹೊಂದಿರುವ ಸ್ಥಿರಾಸ್ತಿಯ ಮಾಹಿತಿ ಪಡೆದು ಭೂಕಂದಾಯ ಬಾಕಿಯೆಂದು ಪರಿಗಣಿಸಿ ಸಾಲ ವಸೂಲಿ ಮಾಡಲು ಕ್ರಮ ಜರುಗಿಸಬೇಕು. ಅಲ್ಲದೇ ಸರ್ಕಾರದಿಂದ ದೊರೆಯುವ ಇನ್ನಿತರ ಸೌಲಭ್ಯಗಳನ್ನು ಕಡಿತಗೊಳಿಸಲು ಕ್ರಮವಹಿಸಬೇಕು.

**15. ಸಾಲದ ಉಪಯೋಗ:–**

ಈ ಯೋಜನೆಯಲ್ಲಿ ಫಲಾನುಭವಿಯು ಸಾಲ ಮಂಜೂರಾದ ಉದ್ದೇಶಕ್ಕೆ ಉಪಯೋಗಿಸಿ ಘಟಕ ಸ್ಥಾಪನೆ ಮಾಡಿ ನಿರ್ವಹಿಸಬೇಕು. ಒಂದು ವೇಳೆ ಮಂಜೂರಾದ ಸಾಲವನ್ನು ಮಂಜೂರಾದ ಉದ್ದೇಶಕ್ಕೆ ಉಪಯೋಗಿಸದೇ ಅಥವಾ ಒಂದು ಪಕ್ಷ ಹಣವನ್ನು ಬೇರೆ ಉದ್ದೇಶಕ್ಕೆ ಉಪಯೋಗಿಸಿರುವುದು ಕಂಡುಬಂದರೆ ಜಿಲ್ಲಾ ಸಮಿತಿಯ ಸದಸ್ಯ ಕಾರ್ಯದರ್ಶಿಗಳು ಪೂರ್ಣ ಸಾಲವನ್ನು ಒಂದೇ ಇಡಿಗಂಟಿನಲ್ಲಿ ವಸೂಲಿ ಮಾಡಲು ಕ್ರಮ ಜರುಗಿಸುವುದು.

**16. ವಿಮೆ:**

ಫಲಾನುಭವಿಗಳು ಪಡೆಯುವ ಸಾಲದ ಮೊತ್ತದಲ್ಲಿ ಖರೀದಿಸುವ ಉತ್ಪನ್ನಗಳಿಗೆ/ಘಟಕಗಳಿಗೆ ವ್ಯಾಪಕ ವಿಮೆಯನ್ನು ಮಾಡಿಸಬೇಕು.

ನಿಗಮದಿಂದ ಸಾಲ ಪಡೆದು ನಡೆಸಲ್ಪಡುವ ಘಟಕಗಳ/ಸ್ಥಳಗಳ ಪ್ರವೇಶದ್ವಾರದಲ್ಲಿ " ಆರ್ಥಿಕ ನೆರವು : ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ, __________ ಜಿಲ್ಲೆ, ಇವರಿಂದ" ಎಂದು ಬೋರ್ಡ್‌ನ್ನು/ಫಲಕಗಳನ್ನು ಬರೆಯಿಸಿರಬೇಕು.

**ಎ.ಎಂ.ಚಿದಾನಂದ ಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 869

**ವಿಷಯ:** ಹಿಂದುಳಿದ ವರ್ಗಗಳ ಭೂರಹಿತ ಕೃಷಿಕಾರ್ಮಿಕರು ಮತ್ತು ಭೂ ರಹಿತ ಕೂಲಿಕಾರ್ಮಿಕರಿಗೆ ವಿಶೇಷ ಆರ್ಥಿಕ ಸೌಲಭ್ಯ ಒದಗಿಸಲು ವಿಶೇಷ ಯೋಜನೆ.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯುಎಲ್ 59 ಬಿಸಿಎ 88, ದಿನಾಂಕ: 16–11–1991.

(2) ವ್ಯವಸ್ಥಾಪಕ ನಿರ್ದೇಶಕರು, ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ, ಬೆಂಗಳೂರು, ಇವರ ಏಕ ಕಡತ ಸಂಖ್ಯೆ : ದೇಹಿನಿ / ಸಿಆರ್–33/2006–07, ದಿನಾಂಕ: 3–5–2006.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 16–11–1991ರ ಸರ್ಕಾರದ ಆದೇಶದಲ್ಲಿ ಹಿಂದುಳಿದ ವರ್ಗಗಳ ಜನರಿಗೆ ಸಾಲ ಮಂಜೂರು ಮಾಡುವ ವಿಧಿ ವಿಧಾನಗಳೊಂದಿಗೆ ಜಿಲ್ಲಾ ಸಮಿತಿಯನ್ನು ರಚಿಸಲಾಗಿದೆ.

ಮೇಲ್ಕಂಡ ಉಲ್ಲೇಖ (2)ರಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಏಕ ಕಡತದಲ್ಲಿ ಪ್ರಸ್ತಾವನೆ ಸಲ್ಲಿಸಿ, ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮವು 1977ರಿಂದ ಹಿಂದುಳಿದ ವರ್ಗಗಳ ಜನರ ಅಭಿವೃದ್ಧಿಗೆ ಆರ್ಥಿಕ ನೆರವನ್ನು ಒದಗಿಸಲಾಗುತ್ತಿದೆ. ಪ್ರಸ್ತುತ ಅಸಂಘಟಿತ ವಲಯದಲ್ಲಿ ಇರುವ ಭೂರಹಿತ ಕೃಷಿ ಕಾರ್ಮಿಕರು, ನಿರ್ಮಾಣ ಕೆಲಸಗಾರರು, ಮನೆಗೆಲಸಗಾರರು, ಜೀವನಾವಶ್ಯಕತೆಗಾಗಿ ಮತ್ತೊಬ್ಬರನ್ನು ಅವಲಂಬಿಸಿರುವುದು ಹಾಗೂ ದುಡಿಮೆಗಾಗಿ ಪ್ರದೇಶದಿಂದ ಪ್ರದೇಶಕ್ಕೆ ವಲಸೆ ಹೋಗುವುದು ಮತ್ತು ನಿರಂತರ ಕೆಲಸ ದೊರೆಯದೆ ಅತಂತ್ರತೆಯನ್ನು ಅನುಭವಿಸುತ್ತಿರುವಂತಹ ಹಿಂದುಳಿದ ವರ್ಗಗಳ ಜನರನ್ನು ಗುರ್ತಿಸಿ ಅಂತಹವರಿಗೆ ಆರ್ಥಿಕ ಸೌಲಭ್ಯ ಒದಗಿಸಿದ ಸಂದರ್ಭದಲ್ಲಿ ಅವರು ಒಂದು ನೆಲೆಯನ್ನು ಕಂಡುಕೊಳ್ಳುತ್ತಾರೆ ಮತ್ತು ಸ್ವ–ಉದ್ಯೋಗಕ್ಕೆ ಅವಕಾಶವಾಗುತ್ತದೆ. ಈ ಹಿನ್ನೆಲೆಯಲ್ಲಿ ಹಿಂದುಳಿದ ವರ್ಗಗಳ ಭೂರಹಿತ ಕೃಷಿ ಕಾರ್ಮಿಕರು ಹಾಗೂ ಭೂರಹಿತ ಕೂಲಿ ಕಾರ್ಮಿಕರಿಗೆ ಅಗತ್ಯವಿರುವ ಆರ್ಥಿಕ ನೆರವನ್ನು ಒದಗಿಸಲು ಹಾಗೂ ಸ್ವಯಂ ಉದ್ಯೋಗ ಕೈಗೊಳ್ಳಲು ಅಗತ್ಯವಿರುವ ಸೂಕ್ತ ತರಬೇತಿಗಳನ್ನು ನೀಡುವ ಅವಶ್ಯಕತೆಯನ್ನು ಮನಗಂಡು ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮವು 2006–07ನೇ ಸಾಲಿನಿಂದಲೇ ಭೂರಹಿತ ಕೃಷಿ ಕಾರ್ಮಿಕರು ಹಾಗೂ ಭೂರಹಿತ ಕೂಲಿ ಕಾರ್ಮಿಕ ಜನರಿಗೆ ಅವರು ಕೈಗೊಳ್ಳುವ ಆರ್ಥಿಕ ಚಟುವಟಿಕೆಗಳು ಮತ್ತು ಅವಶ್ಯಕತೆ ಗನುಗುಣವಾಗಿ ಸಾಲ ಸೌಲಭ್ಯ ಒದಗಿಸಲು ದಿನಾಂಕ: 7–4–2006 ರಂದು ನಡೆದ ನಿಗಮದ ನಿರ್ದೇಶಕ ಮಂಡಳಿ ಸಭೆಯು ಅನುಮೋದಿಸಿರುವಂತೆ ಸರ್ಕಾರವು ಆಯವ್ಯಯದಲ್ಲಿ ನಿಗಮಕ್ಕೆ ಒದಗಿಸುವ ಸಬ್ಸಿಡಿ ಮತ್ತು ಷೇರು ಬಂಡವಾಳದಲ್ಲಿ ಈ ಯೋಜನೆಯನ್ನು 2006–07ನೇ ಸಾಲಿನಿಂದಲೇ ಅನುಷ್ಠಾನಗೊಳಿಸಲು ಕೋರಿರುತ್ತಾರೆ ಹಾಗೂ ಈ ಯೋಜನೆಯ ಕುರಿತು ಕರಡು ನಿಯಮ ಮತ್ತು ಮಾರ್ಗಸೂಚಿಗಳೊಂದಿಗೆ ಪ್ರಸ್ತಾವನೆ ಸಲ್ಲಿಸಿ ಅನುಮತಿ ನೀಡಿ ಆದೇಶ ಹೊರಡಿಸಲು ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಕಇ 181 ಬಿಎಂಎಸ್ 2006, ಬೆಂಗಳೂರು., ದಿನಾಂಕ: 20ನೇ ಮೇ 2006**

ವ್ಯವಸ್ಥಾಪಕ ನಿರ್ದೇಶಕರು, ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಹಿಂದುಳಿದ ವರ್ಗಗಳ ಭೂರಹಿತ ಕೃಷಿಕಾರ್ಮಿಕರು ಮತ್ತು ಭೂ ರಹಿತ ಕೂಲಿಕಾರ್ಮಿಕರಿಗೆ ವಿಶೇಷ ಆರ್ಥಿಕ ಸೌಲಭ್ಯ ಒದಗಿಸಲು ರೂಪಿಸಿರುವ ಹಾಗೂ ಅನುಬಂಧದಲ್ಲಿ ತಿಳಿಸಿರುವ ಈ ವಿಶೇಷ ಯೋಜನೆಯ ನಿಯಮ ಮತ್ತು ಮಾರ್ಗಸೂಚಿಗಳನ್ನು ಅನುಮೋದಿಸಿದೆ. ಅದರಂತೆ ಹಿಂದುಳಿದ ವರ್ಗಗಳ ಭೂರಹಿತ ಕೃಷಿಕಾರ್ಮಿಕರು ಮತ್ತು ಭೂ ರಹಿತ ಕೂಲಿಕಾರ್ಮಿಕರಿಗೆ ಆರ್ಥಿಕ ನೆರವು ಒದಗಿಸಲು ಈ ವಿಶೇಷ ಯೋಜನೆಯನ್ನು 2006–07ನೇ ಸಾಲಿನಿಂದಲೇ ಅನುಷ್ಠಾನಗೊಳಿಸಲು ಆದೇಶಿಸಿದೆ. ಆಯವ್ಯಯದಲ್ಲಿ ಒದಗಿಸಲಾದ ಷೇರು ಬಂಡವಾಳ ಮತ್ತು ಸಬ್ಸಿಡಿಯನ್ನು ಹೊಂದಾಣಿಕೆ ಮಾಡಿಕೊಂಡು ಕಾರ್ಯಗತಗೊಳಿಸಲು ಆದೇಶಿಸಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು 2006–07ನೇ ಸಾಲಿನಲ್ಲಿ ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮಕ್ಕೆ ಒದಗಿಸಿರುವ ಷೇರು ಬಂಡವಾಳ ಮತ್ತು ಸಹಾಯಾನುದಾನ ಲೆಕ್ಕಶೀರ್ಷಿಕೆಗಳಿಂದ ಭರಿಸತಕ್ಕದ್ದು. ಸರ್ಕಾರದ ಪೂರ್ವಾನುಮತಿ ಪಡೆದು ಮೇಲ್ಕಂಡ ಲೆಕ್ಕಶೀರ್ಷಿಕೆಯಡಿ ಹಣ ಡ್ರಾ ಮಾಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಎಂ.ಚಿದಾನಂದ ಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

**ದಿನಾಂಕ : 20–05–2006ರ ಸರ್ಕಾರದ ಆದೇಶ ಸಂಖ್ಯೆ: ಸಕಇ 181 ಬಿಎಂಎಸ್ 2006ರ ಅನುಬಂಧ**

ಹಿಂದುಳಿದ ವರ್ಗಗಳ ಭೂರಹಿತ ಕೃಷಿಕಾರ್ಮಿಕರು ಮತ್ತು ಭೂ ರಹಿತ ಕೂಲಿಕಾರ್ಮಿಕರಿಗೆ ವಿಶೇಷ ಆರ್ಥಿಕ ಸೌಲಭ್ಯ ನೀಡುವ ಸಂಬಂಧ ರಚಿತವಾದ ನಿಯಮ ಮತ್ತು ಮಾರ್ಗಸೂಚಿಗಳು.

**1) ಪೀಠಿಕೆ:–**

ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮವು ರಾಜ್ಯದಲ್ಲಿರುವ ಹಿಂದುಳಿದ ವರ್ಗಗಳ ಪ್ರವರ್ಗ– 1ಎ, 2ಎ, 3ಎ ಮತ್ತು 3ಬಿಗೆ ಸೇರಿದ ಜನರ ಆರ್ಥಿಕಾಭಿವೃದ್ಧಿಗೆ ಸರ್ಕಾರವು ಆಯವ್ಯಯದಲ್ಲಿ ಒದಗಿಸುವ ಹಣದಿಂದ ಹಲವಾರು ಆರ್ಥಿಕ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸ ಲಾಗುತ್ತಿದೆ. ಪ್ರಸ್ತುತ ಅಸಂಘಟಿತ ವಲಯದಲ್ಲಿ ಇರುವ ಭೂರಹಿತ ಕೃಷಿ ಕಾರ್ಮಿಕರು, ನಿರ್ಮಾಣ ಕೆಲಸಗಾರರು, ಮನೆಗೆಲಸಗಾರರು, ಜೀವನಾವಶ್ಯಕತೆಗಾಗಿ ಮತ್ತೊಬ್ಬರನ್ನು ಅವಲಂಬಿಸಿರುವುದು ಹಾಗೂ ದುಡಿಮೆಗಾಗಿ ಪ್ರದೇಶದಿಂದ ಪ್ರದೇಶಕ್ಕೆ ವಲಸೆ ಹೋಗುವುದು ಮತ್ತು ನಿರಂತರ ಕೆಲಸ ದೊರೆಯದೆ ಅತಂತ್ರತೆಯನ್ನು ಅನುಭವಿಸುತ್ತಿದ್ದಾರೆ. ಹಿಂದುಳಿದ ವರ್ಗಗಳಲ್ಲಿ ಇಂತಹ ಜನರನ್ನು ಗುರ್ತಿಸಿ ಆರ್ಥಿಕ ಸೌಲಭ್ಯ ಒದಗಿಸಿದ ಸಂದರ್ಭದಲ್ಲಿ ಒಂದು ನೆಲೆಯನ್ನು ಕಂಡುಕೊಳ್ಳುತ್ತಾರೆ ಮತ್ತು ಸ್ವ–ಉದ್ಯೋಗಕ್ಕೆ ಅವಕಾಶವಾಗುತ್ತದೆ. ಈ ಹಿನ್ನೆಲೆಯಲ್ಲಿ ಹಿಂದುಳಿದ ವರ್ಗಗಳ ಭೂರಹಿತ ಕೃಷಿ ಕಾರ್ಮಿಕರು ಹಾಗೂ ಭೂರಹಿತ ಕೂಲಿ ಕಾರ್ಮಿಕರಿಗೆ ವಿಶೇಷ ಆರ್ಥಿಕ ಸೌಲಭ್ಯವನ್ನು ವಿಸ್ತರಿಸಲು ಯೋಜನೆಯ ಅನುಷ್ಠಾನದ ನಿಯಮ ಮತ್ತು ಷರತ್ತುಗಳನ್ನು ರೂಪಿಸಿದೆ. ದಿನಾಂಕ: 07/04/2006ರಂದು ನಡೆದ ನಿಗಮದ ನಿರ್ದೇಶಕ ಮಂಡಳಿಯ ಸಭೆಯಲ್ಲಿ ಈ ರೂಪುರೇಷೆಗಳ ಬಗ್ಗೆ ಚರ್ಚಿಸಿ ಅನುಮೋದನೆ ನೀಡಿರುತ್ತದೆ. ಈ ಯೋಜನೆಯ ರೂಪುರೇಷೆಗಳು ಈ ಮುಂದಿನಂತಿವೆ.

**2) ವ್ಯಾಖ್ಯಾನಗಳು:**

| | | |
|---|---|---|
| ಅ) ಸರ್ಕಾರ | : | ಅಂದರೆ ಕರ್ನಾಟಕ ಸರ್ಕಾರ. |
| ಆ) ಅತೀ ಹಿಂದುಳಿದ ಜನಾಂಗ | : | ಅಂದರೆ ಸರ್ಕಾರವು ಅಂಗೀಕರಿಸಿದ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿರುವ ಪ್ರವರ್ಗ–1,ಪ್ರವರ್ಗ–2ಎ, 3ಎ,3ಬಿ ಗೆ ಸೇರಿದ ಭೂರಹಿತ ಕೃಷಿ ಕಾರ್ಮಿಕ/ಭೂರಹಿತ ಕೂಲಿ ಕಾರ್ಮಿಕರು. |
| ಇ) ಜಿಲ್ಲಾ ಸಮಿತಿ ಮತ್ತು ಅಧ್ಯಕ್ಷರು | : | ಅಂದರೆ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಚೈತನ್ಯ ಸಬ್ಸಿಡಿ ಕಂ ಸಾಫ್ಟ್‌ಲೋನ್ ಯೋಜನೆಯ ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್ 59 ಬಿಸಿಎ 88, ದಿನಾಂಕ: 16–11–91 ರಲ್ಲಿ ರಚಿಸಿರುವ ಜಿಲ್ಲಾ ಸಮಿತಿ. |
| ಈ) ನಿಗಮ | : | ಅಂದರೆ 1956ನೇ ಕಂಪೆನಿ ಕಾಯ್ದೆಯ ಅನ್ವಯ ರಿಜಿಸ್ಟರ್ ಆಗಿರುವ ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು. |
| ಉ) ಅನುಷ್ಠಾನ ಅಧಿಕಾರಿ | : | ಜಿಲ್ಲಾ ವ್ಯವಸ್ಥಾಪಕರು, ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಮತ್ತು ಜಿಲ್ಲಾ ಸಮಿತಿಯ ಅಭಿವೃದ್ಧಿ ನಿಗಮ ನಿಯಮಿತ, ಸದಸ್ಯ ಕಾರ್ಯದರ್ಶಿ. |
| ಊ) ಸ್ವಸಹಾಯ ಗುಂಪು | : | ಹಿಂದುಳಿದ ವರ್ಗಗಳಿಗೆ ಸೇರಿದ ಭೂರಹಿತ ಕೃಷಿ ಕಾರ್ಮಿಕ/ ಭೂರಹಿತ ಕೂಲಿ ಕಾರ್ಮಿಕ ಜನಾಂಗದವರು ರಚಿಸಿಕೊಂಡು ನಿರ್ವಹಿಸುತ್ತಿರುವ ಸ್ವಸಹಾಯ ಗುಂಪು/ಸ್ತ್ರೀಶಕ್ತಿ ಸಂಘ. |
| ಋ) ಸಹಕಾರ ಸಂಘ | : | ಅತ್ಯಂತ ಹಿಂದುಳಿದ ವರ್ಗಗಳಿಗೆ ಸೇರಿದ ಭೂರಹಿತ ಕೃಷಿ ಕಾರ್ಮಿಕ/ ಭೂರಹಿತ ಕೂಲಿ ಕಾರ್ಮಿಕರು ಕೋ ಆಪರೇಟಿವ್ ಆಕ್ಟ್ 1959ರನ್ವಯ ರಚಿಸಿಕೊಂಡಿರುವ ಸಹಕಾರ ಸಂಘ. |

**3) ಯೋಜನೆಯ ಉದ್ದೇಶ:–**

ಕೂಲಿಗಾಗಿ ಪ್ರದೇಶದಿಂದ ಪ್ರದೇಶಕ್ಕೆ ವಲಸೆ ಹೋಗುತ್ತ ಜೀವನ ನಿರ್ವಹಣೆಗಾಗಿಯೆ ಇಡೀ ಬದುಕನ್ನು ಕಳೆಯುತ್ತಿರುವ ಈ ಅಸಂಘಟಿತ ವಲಯದ ಭೂರಹಿತ ಕೃಷಿಕಾರ್ಮಿಕರು ಮತ್ತು ಭೂರಹಿತ ಕೂಲಿ ಕಾರ್ಮಿಕರಿಗೆ ನಿರಂತರವಾಗಿ ಆದಾಯ ತರುವ ಸ್ವಯಂ ಉದ್ಯೋಗ ಕೈಗೊಳ್ಳಲು ಮತ್ತು ಸ್ಥಳೀಯ ಅಗತ್ಯತೆಗಳನ್ನು ಪೂರೈಸುವ ಉದ್ಯೋಗಗಳನ್ನು ಕೈಗೊಳ್ಳಲು ಅಗತ್ಯತೆ ಇರುವ (Need Based) ಗರಿಷ್ಟ 15,000/– ರೂ.ಗಳ ಸಾಲ ಮತ್ತು ಸಹಾಯಧನವನ್ನು ನೇರವಾಗಿ ನೀಡುವುದು. ವಿಶೇಷ ಪ್ರಕರಣದಲ್ಲಿ ಆಯಾ ಘಟಕ ವೆಚ್ಚವನ್ನು ಆಧರಿಸಿ ಗರಿಷ್ಟ 25,000/– ರೂ.ಗಳವರೆಗೆ ನೀಡಬಹುದು.

**4. ಅರ್ಹತೆ:–**

(ಅ) ಈ ಯೋಜನೆಯಲ್ಲಿ ಆರ್ಥಿಕ ಸಹಾಯ ಪಡೆಯಲು ದಿನಾಂಕ: 30–03–2002ರ ಸರ್ಕಾರಿ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಡಿ/225/ಬಿ.ಸಿ.ಎ/2000 ಆದೇಶದಲ್ಲಿ ಗುರ್ತಿಸಿದ ಅಥವಾ ಸರ್ಕಾರವು ಕಾಲಕಾಲಕ್ಕೆ ಗುರ್ತಿಸಿ ಅಂಗೀಕರಿಸಿದ ಹಿಂದುಳಿದ ವರ್ಗಗಳ ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–3ಎ ಮತ್ತು ಪ್ರವರ್ಗ–3ಬಿ ಗುಂಪಿಗೆ ಸೇರಿದವರಾಗಿರಬೇಕು.

(ಆ) ಅರ್ಜಿದಾರರ ಕುಟುಂಬದ ವಾರ್ಷಿಕ ವರಮಾನ 22,000/– ರೂ.ಗಳಿಗಿಂತ ಕಡಿಮೆ ಇರಬೇಕು.

(ಇ) ಕರ್ನಾಟಕ ರಾಜ್ಯದಲ್ಲಿ ಕನಿಷ್ಠ 15 ವರ್ಷ ವಾಸವಾಗಿರಬೇಕು.

(ಈ) ಅರ್ಜಿದಾರರ ವಯಸ್ಸು ಕನಿಷ್ಟ 18 ವರ್ಷಗಳು ಹಾಗೂ ಗರಿಷ್ಟ 55 ವರ್ಷಗಳ ವಯೋಮಿತಿ ಯೊಳಗಿರಬೇಕು.

(ಉ) ಸರ್ಕಾರದ ಬೇರೆ ಯಾವುದಾದರೂ ಯೋಜನೆಯಲ್ಲಿ ಸಾಲ ಅಥವಾ ಇತರ ಆರ್ಥಿಕ ಸವಲತ್ತು ಪಡೆದಿರಬಾರದು.

(ಊ) ಯೋಜನೆಯಲ್ಲಿ ಶೇ. 33ರಷ್ಟನ್ನು ಮಹಿಳೆಯರಿಗೆ ಮೀಸಲಾತಿ ಇರುತ್ತದೆ. ಇವರಲ್ಲಿ ವಿಧವೆಯರಿಗೆ/ ಪರಿತ್ಯಕ್ತೆಯರಿಗೆ ವಿಶೇಷ ಆದ್ಯತೆ ನೀಡುವುದು.

(ಋ) ಈ ಯೋಜನೆಯಲ್ಲಿ ಶೇಕಡ 5%ರಷ್ಟು ಅಂಗವಿಕಲರಿಗೆ ಕಡ್ಡಾಯವಾಗಿ ಸೌಲಭ್ಯ ಒದಗಿಸಬೇಕು.

(ೠ) ಯೋಜನೆಯಲ್ಲಿ ಒಬ್ಬ ವ್ಯಕ್ತಿಗೆ ಅಥವಾ ಸ್ವ ಸಹಾಯ ಗುಂಪುಗಳ ಮೂಲಕ/ಸಹಕಾರ ಸಂಘಗಳ ಮೂಲಕ ಗುಂಪು ಚಟುವಟಿಕೆಗಾಗಿ ಸಾಲ ನೀಡಬಹುದಾಗಿದೆ.

(ಎ) ಈ ಯೋಜನೆಯಲ್ಲಿ ಸಾಲ ಪಡೆಯಬಯಸುವ ಅರ್ಜಿದಾರರು ತನ್ನ ಆರ್ಥಿಕಾಭಿವೃದ್ಧಿಗೆ ಯಾವುದಾದರೂ ಆರ್ಥಿಕ ಚಟುವಟಿಕೆಯನ್ನು ನಿರ್ವಹಿಸುತ್ತಿರಬೇಕು.

**5. ಅರ್ಜಿಯೊಂದಿಗೆ ಸಲ್ಲಿಸಬೇಕಾದ ದಾಖಲಾತಿಗಳು:–**

ಹಿಂದುಳಿದ ವರ್ಗಗಳಿಗೆ ಸೇರಿದ ಭೂ ರಹಿತ ಕೃಷಿ ಕಾರ್ಮಿಕರು ಮತ್ತು ಭೂರಹಿತ ಕೂಲಿ ಕಾರ್ಮಿಕರ ವರ್ಗಕ್ಕೆ ಸೇರಿದ ಅರ್ಜಿದಾರರು ನಿಗಮವು ನಿಗದಿಪಡಿಸಿದ ದ್ವಿಪ್ರತಿಯಲ್ಲಿರುವ ಅರ್ಜಿ ನಮೂನೆಯಲ್ಲಿ ವಿವರಗಳನ್ನು ಭರ್ತಿ ಮಾಡಿ ಈ ಕೆಳಕಂಡ ದಾಖಲಾತಿಗಳೊಂದಿಗೆ ಅರ್ಜಿಗಳನ್ನು ಜಿಲ್ಲಾ ಸಮಿತಿಗೆ ಸಲ್ಲಿಸಬೇಕು.

ಅ) ಹಿಂದುಳಿದ ವರ್ಗಕ್ಕೆ ಸೇರಿರುವುದಕ್ಕೆ, ಸಂಬಂಧಿಸಿದ ತಾಲ್ಲೂಕು ತಹಶೀಲ್ದಾರ್‌ರವರಿಂದ ನಿಗದಿತ ನಮೂನೆಯಲ್ಲಿ ಪಡೆದ ಜಾತಿ ಪ್ರಮಾಣ ಪತ್ರ ಮತ್ತು ಅರ್ಜಿದಾರರ ಕುಟುಂಬದ ವಾರ್ಷಿಕ ವರಮಾನದ ಪ್ರಮಾಣ ಪತ್ರ.

ಆ) ಅರ್ಜಿದಾರರು ವಾಸಿಸುತ್ತಿರುವ ವಿಳಾಸದ ಪುರಾವೆಗಾಗಿ ಪಡಿತರ ಚೀಟಿ/ಫೋಟೊ ಗುರುತಿನ ಚೀಟಿ/ವಾಸಸ್ಥಳ ದೃಢೀಕರಣ ಪತ್ರ.

ಇ) ಅರ್ಜಿದಾರರ ಪಾಸ್ ಪೋರ್ಟ್ ಅಳತೆಯ ಇತ್ತೀಚಿನ 5 ಫೋಟೊಗಳು.

ಈ) ಅರ್ಜಿದಾರರು ಭೂರಹಿತ ಕೃಷಿಕಾರ್ಮಿಕ ಅಥವಾ ಭೂರಹಿತ ಕೂಲಿಕಾರ್ಮಿಕರಾಗಿರುವ ಬಗ್ಗೆ ಗ್ರಾಮ ಲೆಕ್ಕಾಧಿಕಾರಿ ಅಥವಾ ಗ್ರಾಮಪಂಚಾಯಿತಿ ಕಾರ್ಯದರ್ಶಿಗಳಿಂದ ಪಡೆದಿರುವ ಪ್ರಮಾಣ ಪತ್ರ.

ಉ) ಅರ್ಜಿದಾರರು ಸ್ಥಳೀಯ ಬ್ಯಾಂಕು/ಹಣಕಾಸು ಸಂಸ್ಥೆಗಳಲ್ಲಿ ಸಾಲ ಹೊಂದಿಲ್ಲದಿರುವುದಕ್ಕೆ, ಸುಸ್ತಿದಾರರಲ್ಲವೆಂಬುದಕ್ಕೆ ಬೇಬಾಕಿ ಪ್ರಮಾಣ ಪತ್ರ.

**6. ಗುರ್ತಿಸಲಾದ ಅರ್ಹ ಭೂರಹಿತ ಕೃಷಿ ಕಾರ್ಮಿಕರು/ಭೂರಹಿತ ಕೂಲಿ ಕಾರ್ಮಿಕರು ಕೈಗೊಳ್ಳಬಹುದಾದ ಸಾಲದ ಉದ್ದೇಶಗಳು:–**

ಹೈನುಗಾರಿಕೆ, ಕುರಿ ಸಾಕಾಣಿಕೆ, ಕೋಳಿ ಸಾಕಾಣಿಕೆ, ಸಂಚಾರಿ ಸಂತೆ ವ್ಯಾಪಾರ, ಗುತ್ತಿಗೆ ಆಧಾರದ ಮೇಲೆ ಭೂಮಿ ಪಡೆದು ವಾಣಿಜ್ಯ ಬೆಳೆಗಳಾದ ರೇಷ್ಮೆ, ಹೂವು, ತರಕಾರಿ, ಹಣ್ಣು–ಹಂಪಲು ಬೆಳೆಯುವುದು, ಎತ್ತುಗಾಡಿ, ಸಣ್ಣ ವ್ಯಾಪಾರ, ಮನೆ ಕಾಂಟ್ರಾಕ್ಟ್ ಕೆಲಸ, ಸೆಂಟ್ರಿಂಗ್ ಕೆಲಸ, ಮನೆಗಳಿಗೆ ಪೇಯಿಂಟಿಂಗ್ ಮಾಡುವುದು, ಪ್ಲಂಬ್ಲಿಂಗ್ ಕೆಲಸ, ಕಾರ್ಪೆಂಟರಿ ಕೆಲಸ, ಇವುಗಳಲ್ಲದೆ ಕೃಷಿಕಾರ್ಮಿಕರು/ಕೂಲಿ ಕಾರ್ಮಿಕರು ಕೈಗೊಳ್ಳಬೇಕಾದ ಇತರೆ ವೃತ್ತಿಗಳು.

**7. ಘಟಕ ವೆಚ್ಚ– ಸಾಲದ ಮೊತ್ತ ಮತ್ತು ಸಹಾಯ ಧನ:–**

(ಅ) ವಿಶೇಷ ಆರ್ಥಿಕ ನೆರವು ಯೋಜನೆಗೆ ಒಳಪಡುವ ಅತೀ ಹಿಂದುಳಿದ ಭೂರಹಿತ ಕೃಷಿ/ಭೂರಹಿತ ಕೂಲಿ ಕಾರ್ಮಿಕರು ಅವರು ಕೈಗೊಳ್ಳುವ ಉದ್ದೇಶಗಳಿಗಾಗಿ ಆರ್ಥಿಕ ನೆರವನ್ನು ಆಯಾ ಪ್ರದೇಶ ಹಾಗೂ ಅರ್ಜಿದಾರರ ಕೈಗೊಳ್ಳುವ ಚಟುವಟಿಕೆ ಮತ್ತು ಸಾಮರ್ಥ್ಯಕ್ಕನುಗುಣವಾಗಿ ಗರಿಷ್ಠ 15000/–ರೂ.ಗಳ ಸಾಲ ಮತ್ತು ಸಹಾಯಧನ ನೀಡಲಾಗುವುದು. ವಿಶೇಷ ಪ್ರಕರಣದಲ್ಲಿ ಆಯಾ ಘಟಕ ವೆಚ್ಚವನ್ನು ಆಧರಿಸಿ ಗರಿಷ್ಟ 25,000/– ರೂ.ಗಳವರೆಗೆ ನೀಡಬಹುದಾಗಿದೆ. ಯೋಜನೆಗಳ ಆರ್ಥಿಕ ಸಮಂಜಸತೆ ಲಾಭದಾಯಕತೆ ಹಾಗೂ ಮಾರುಕಟ್ಟೆಯ ವ್ಯವಸ್ಥೆಯನ್ನು ಪರಿಗಣನೆಗೆ ತೆಗೆದುಕೊಂಡು ಆಯಾ ಘಟಕ ವೆಚ್ಚಕ್ಕೆ ಅಗತ್ಯವಿರುವ ಪೂರ್ಣ ಹಣವನ್ನು ನೇರಸಾಲವಾಗಿ ನೀಡಲಾಗುತ್ತದೆ. ಆಯಾ ಘಟಕ ವೆಚ್ಚಕ್ಕೆ ಅನುಗುಣವಾಗಿ ಶೇ.50 ಅಥವಾ ಗರಿಷ್ಟ 5000/– ರೂ. ಸಹಾಯಧನವನ್ನು/ಸಬ್ಸಿಡಿ ನೀಡಲಾಗುತ್ತದೆ. ಸಾಲವನ್ನು ನಿಗದಿತ 5 ವರ್ಷ ಅವಧಿಯಲ್ಲಿ ಬಡ್ಡಿಸಹಿತ ಮರುಪಾವತಿಸಬೇಕು.

(ಆ) (1) ಭೂರಹಿತ ಕೃಷಿ/ಭೂರಹಿತ ಕೂಲಿ ಕಾರ್ಮಿಕರು ಜನರು ಸಂಘಟಿಸಿ ನಡೆಸುತ್ತಿರುವ ಪ್ರತಿ ಸ್ವ–ಸಹಾಯ ಗುಂಪಿನ ಗರಿಷ್ಠ 10 ಜನರಿಗೆ ಘಟಕ ವೆಚ್ಚ ಆಧರಿಸಿ ಯೋಜನೆಗೆ ತಕ್ಕಂತೆ ಅಥವಾ ಪ್ರತಿ ವ್ಯಕ್ತಿಗೆ ಗರಿಷ್ಠ 15,000/–ರೂ.ಗಳು ಮೀರದಂತೆ ಒಂದು ಗುಂಪಿಗೆ ಗರಿಷ್ಠ 1.50 ಲಕ್ಷ ರೂ.ಗಳನ್ನು ಮಂಜೂರು ಮಾಡಬಹುದಾಗಿರುತ್ತದೆ.

(2) ಭೂರಹಿತ ಕೃಷಿ/ಭೂರಹಿತ ಕೂಲಿ ಕಾರ್ಮಿಕರು ಜನರು ಸ್ಥಾಪಿಸಿ ನಡೆಸುತ್ತಿರುವ ಸಹಕಾರ ಸಂಘಗಳ ಮೂಲಕ ಗುಂಪು ಚಟುವಟಿಕೆಗಳಿಗೆ ಗರಿಷ್ಠ 20 ಜನರಿಗೆ ಚಟುವಟಿಕೆಗಳನ್ನಾಧರಿಸಿ ಪ್ರತಿ ವ್ಯಕ್ತಿಗೆ ಗರಿಷ್ಠ 15,000/– ರೂ.ಗಳು ಮೀರದಂತೆ ಗುಂಪಿಗೆ ಸಹಕಾರ ಸಂಘದ ಮೂಲಕ ಗರಿಷ್ಠ 3.00 ಲಕ್ಷ ರೂ.ಗಳನ್ನು ಮಂಜೂರು ಮಾಡಬಹುದಾಗಿರುತ್ತದೆ. ಈ ಎರಡೂ ಪ್ರಕರಣಗಳಲ್ಲೂ ಸಹಾಯಧನದ ಮೊತ್ತವು ಪ್ರತಿ ಫಲಾನುಭವಿಗೆ ಶೇ. 50 ಭಾಗ ಅಥವಾ ಗರಿಷ್ಟ ತಲಾ ರೂ.5000/– ಮಂಜೂರುಮಾಡುವುದು.

(3) ಸಹಕಾರ ಸಂಘಗಳಿಗೆ ಸಾಲ ಮಂಜೂರು ಮಾಡುವಾಗ ಆ ಸಂಸ್ಥೆಗಳು ಪ್ರಾರಂಭವಾಗಿ ಕನಿಷ್ಠ 3 ವರ್ಷಗಳಾಗಿರಬೇಕು, ಲಾಭದಲ್ಲಿ ನಡೆಯುತ್ತಿರಬೇಕು ಮತ್ತು ಆಡಿಟ್ ವರದಿಯಲ್ಲಿ ಯಾವುದೇ ರೀತಿಯ ಆಕ್ಷೇಪಣೆಗಳಿರಬಾರದು.

(4) ಈ ಜನಾಂಗಗಳು ರಚಿಸಿರುವ ಸ್ವಸಹಾಯ ಗುಂಪು/ಸ್ತ್ರೀ ಶಕ್ತಿ ಗುಂಪುಗಳಿಗೆ ಸಾಲ ಮಂಜೂರು ಮಾಡುವಾಗ ಅವುಗಳ ನಿರ್ವಹಿಸುತ್ತಿರುವ ಲೆಕ್ಕಪತ್ರಗಳು ಮತ್ತು ಅವುಗಳು ಕೈಗೊಳ್ಳುವ ಕಾರ್ಯಚಟುವಟಿಕೆಗಳನ್ನಾಧರಿಸಿ ಉತ್ತಮವಾಗಿ ಕಾರ್ಯನಿರ್ವಹಿಸುವ ಹಾಗೂ ಮರುಪಾವತಿಗೆ ಖಾತ್ರಿ ನೀಡುವ ಸ್ವಸಹಾಯ ಗುಂಪುಗಳ ಮೂಲಕ ಮಾತ್ರ ಸಾಲ ಮಂಜೂರು ಮಾಡಬೇಕು.

(5) ನಿಯಮಾನುಸಾರ ಕ್ರಮಬದ್ಧವಾಗಿ ಕಾರ್ಯ ನಿರ್ವಹಿಸುತ್ತಿರುವ ಆರ್ಥಿಕವಾಗಿ ಸದೃಢವಾಗಿ ಕಾರ್ಯನಿರ್ವಹಿಸುತ್ತಿರುವ ಹಾಗೂ ಸಾಲವನ್ನು ಫಲಾನುಭವಿಗಳಿಂದ ವಸೂಲು ಮಾಡಿ ನಿಗಮಕ್ಕೆ ಸಂದಾಯ ಮಾಡಲು ನಿಗದಿತ ನಮೂನೆಯಲ್ಲಿ ಕರಾರು ಒಪ್ಪಂದಕ್ಕೆ ಸಹಿ ಮಾಡಿ ಕೊಡುವಂತಹ ಸ್ವ–ಸಹಾಯ ಗುಂಪುಗಳು/ಸಹಕಾರ ಸಂಘಗಳನ್ನು ಮಾತ್ರ ಪರಿಗಣಿಸಲಾಗುತ್ತದೆ.

(6) ಸಾಲ ಮಂಜೂರಾದ ಎಲ್ಲಾ ಫಲಾನುಭವಿಗಳಿಗೆ ಕಡ್ಡಾಯವಾಗಿ ಸಾಲ ವಿತರಣಾ ಪೂರ್ವ ಸಮಾಲೋಚನೆ ಏರ್ಪಡಿಸಿ ಸಾಲ ಮಂಜೂರಾತಿಯ ಉಪಯುಕ್ತತೆ, ಸದುಪಯೋಗ, ಮರುಪಾವತಿ ಮತ್ತು ಅವಶ್ಯಕ ವಿಮೆಗಳ ಬಗ್ಗೆ ಹಾಗೂ ಘಟಕಗಳನ್ನು ಸ್ಥಾಪಿಸಿ ನಿರ್ವಹಿಸುವ ಬಗ್ಗೆ ಸವಿವರವಾದ ತಿಳುವಳಿಕೆ ನೀಡಬೇಕು.

(7) ಫಲಾನುಭವಿಗಳಿಗೆ ಅವರು ಕೈಗೊಳ್ಳುವ ಆರ್ಥಿಕ ಚಟುವಟಿಕೆಗಳನ್ನಾಧರಿಸಿ ಜಿಲ್ಲೆಯಲ್ಲಿರುವ ಉತ್ತಮ ತರಬೇತಿ ಸಂಸ್ಥೆಗಳ ಸಹಯೋಗದೊಂದಿಗೆ ಕಡ್ಡಾಯವಾಗಿ ಉದ್ಯಮಶೀಲತಾ ತರಬೇತಿಯನ್ನು ಒದಗಿಸಬೇಕು.

**8. ಬಡ್ಡಿಯ ದರ :–**

ಈ ಯೋಜನೆಯಲ್ಲಿ ಕೊಡುವ ಸಾಲಕ್ಕೆ ವಾರ್ಷಿಕ ಶೇ. 4ರಂತೆ ಸರಳ ಬಡ್ಡಿಯನ್ನು ವಿಧಿಸಲಾಗುತ್ತದೆ.

**9. ಸುಸ್ತಿ ಬಡ್ಡಿ :**

ನಿಗದಿತ ಕಂತುಗಳ ಅನ್ವಯ ಮರುಪಾವತಿ ಮಾಡದಿದ್ದರೆ ಬಾಕಿಯಾಗುವ/ ಸುಸ್ತಿಯಾಗುವ ಸಾಲದ ಕಂತುಗಳ ಮೊತ್ತಕ್ಕೆ ವಾರ್ಷಿಕ ಶೇ.2ರಷ್ಟು ಸುಸ್ತಿ ಬಡ್ಡಿಯನ್ನು ವಿಧಿಸಲಾಗುತ್ತದೆ.

**10. ಮರುಪಾವತಿ ಅವಧಿ:**

ಮರುಪಾವತಿ ಅವಧಿಯು ಗರಿಷ್ಠ 5 ವರ್ಷ. ಸಾಲ ಬಿಡುಗಡೆಯಾದ ದಿನಾಂಕದಿಂದ 2 ತಿಂಗಳ ವಿರಾಮಾವಧಿಯನ್ನು ನೀಡಲಾಗುತ್ತದೆ ಹಾಗೂ ನಂತರ 58 ತಿಂಗಳ ಅವಧಿಯಲ್ಲಿ ಮಾಸಿಕ ಕಂತುಗಳಲ್ಲಿ ಸಾಲವನ್ನು ಫಲಾನುಭವಿಗಳು ಮರುಪಾವತಿಸಬೇಕು.

**11. ಜಿಲ್ಲಾ ಸಮಿತಿ:–**

ಈ ಯೋಜನೆಯಲ್ಲಿ ಸೌಲಭ್ಯ ಪಡೆಯುವ ಫಲಾನುಭವಿಗಳ ಆಯ್ಕೆಯನ್ನು ಜಿಲ್ಲಾ ಸಮಿತಿ ಆಯ್ಕೆ ಮಾಡಲಾಗುತ್ತದೆ. ಈ ಆಯ್ಕೆ ಪ್ರಕ್ರಿಯೆಗಾಗಿ ಮತ್ತು ಯೋಜನೆಯ ಅನುಷ್ಠಾನಕ್ಕಾಗಿ ಎಲ್ಲಾ ಜಿಲ್ಲೆಗಳಲ್ಲಿ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಹಣಾಧಿಕಾರಿಯವರ ಅಧ್ಯಕ್ಷತೆಯಲ್ಲಿ ಜಿಲ್ಲಾ ಸಮಿತಿಯನ್ನು ರಚಿಸಲಾಗಿರುತ್ತದೆ. ಈ ಸಮಿತಿಗಳು ಜಿಲ್ಲಾ ಮಟ್ಟದ ನಿಗಮದ ಘಟಕವಾಗಿ ಕಾರ್ಯನಿರ್ವಹಿಸುತ್ತವೆ.

**12. ಫಲಾನುಭವಿಗಳ ಆಯ್ಕೆ ಮತ್ತು ಸಾಲ ಮಂಜೂರಾತಿಯ ವಿಧಾನ:–**

(1) ಜಿಲ್ಲಾ ಸಮಿತಿಯ ಸದಸ್ಯ ಕಾರ್ಯದರ್ಶಿಗಳು ಜಿಲ್ಲಾ ಮಟ್ಟದಲ್ಲಿ ಆಯಾಯ ಆರ್ಥಿಕ ವರ್ಷಕ್ಕೆ ನೀಡುವ ಗುರಿಯನ್ವಯ ವೃತ್ತಪತ್ರಿಕೆಗಳಲ್ಲಿ ಯೋಜನೆಯ ಮಾಹಿತಿ ನೀಡಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸುವುದು.

(2) ಜಿಲ್ಲಾ ಸಮಿತಿ ಕಾರ್ಯದರ್ಶಿಯವವರು ಸ್ವೀಕರಿಸಲಾದ ಅರ್ಜಿಗಳನ್ನು ಕಾಲಾನುಕ್ರಮಣಿಕೆಯಲ್ಲಿ ದಾಖಲಿಸಿಕೊಂಡ ನಂತರ ಆ ಎಲ್ಲಾ ಅರ್ಜಿಗಳನ್ನು ಪರಿಶೀಲಿಸಿ ಗ್ರಾಮ ಪಂಚಾಯತ್‌ವಾರು ಪಟ್ಟಿ ಮಾಡಿಕೊಳ್ಳುವುದು. ಸ್ವೀಕರಿಸಲಾದ ಅರ್ಜಿಗಳಲ್ಲಿ ಆ ಅರ್ಜಿದಾರರ ಕೌಟುಂಬಿಕ ಹಿನ್ನಲೆ, ಅರ್ಜಿದಾರರ ಕಾರ್ಯ ನಿರ್ವಹಣೆಯ ಹಿನ್ನೆಲೆಯ ಪರಿಶೀಲನೆ, ಅವರು ಈಗಾಗಲೇ ಸಾಲ ಪಡೆದಿದ್ದಾರೆಯೇ ಇಲ್ಲವೇ ಎಂಬುದರ ಬಗ್ಗೆ ಮಾಹಿತಿ ಸಂಗ್ರಹಣೆ, ಅರ್ಜಿದಾರರು ಕೈಗೊಳ್ಳುವ/ ಆರ್ಥಿಕ ಚಟುವಟಿಕೆ ಪರಿಣಿತಿ/ತರಬೇತಿ, ಅವರ ಆರ್ಥಿಕ ಸ್ಥಿತಿಗತಿ, ಮಾರುಕಟ್ಟೆಯ ವ್ಯವಸ್ಥೆ ಇತ್ಯಾದಿ ಎಲ್ಲಾ ಅಂಶಗಳನ್ನು ಪರ್ಯಾಲೋಚಿಸಿ ಅರ್ಹ ಫಲಾನುಭವಿಗಳ ಪ್ರಸ್ತಾವನೆಗಳನ್ನು/ಅರ್ಜಿಗಳ ಪಟ್ಟಿಯನ್ನು ಮತ್ತು ಮಂಜೂರು ಮಾಡಬಹುದಾದ ಸಾಲದ ಮೊತ್ತದ ವಿವರಗಳೊಂದಿಗೆ ಪ್ರಸ್ತಾವನೆಗಳನ್ನು ಜಿಲ್ಲಾ ಸಮಿತಿಯ ಮುಂದೆ ಮಂಡಿಸುವುದು.

(3) ಜಿಲ್ಲಾ ಸಮಿತಿಯು ಅರ್ಜಿದಾರರು ಕೈಗೊಳ್ಳುವ ಆರ್ಥಿಕ ಚಟುವಟಿಕೆಗಳನ್ನು ಆಧರಿಸಿ ಅಗತ್ಯವಿರುವ ಸಾಲವನ್ನು ಮಾತ್ರ ಮಂಜೂರಾತಿ ನೀಡಿ ಅನುಮೋದಿಸಿದ ಪ್ರಸ್ತಾವನೆಯನ್ನು ನಿಗಮದ ಕೇಂದ್ರ ಕಚೇರಿಗೆ ಕಳುಹಿಸುವುದು. ಈ ಪ್ರಸ್ಥಾವನೆಯನ್ನು ಕೇಂದ್ರ ಕಚೇರಿಯಲ್ಲಿ ಪರಿಶೀಲಿಸಿ ಸಾಲವನ್ನು ಮಂಜೂರು ಮಾಡಿ ಜಿಲ್ಲಾ ಕಚೇರಿಗೆ ಬಿಡುಗಡೆ ಮಾಡುವುದು.

(4) ಕೇಂದ್ರ ಕಚೇರಿಯಿಂದ ಮಂಜೂರು ಮಾಡಿ ಬಿಡುಗಡೆ ಮಾಡಿದ ಸಾಲದ ಮೊತ್ತಕ್ಕನುಗುಣವಾಗಿ ಫಲಾನುಭವಿಗಳಿಂದ ಈ ಕೆಳಕಂಡ ದಸ್ತಾವೇಜುಗಳನ್ನು ಜಿಲ್ಲಾ ವ್ಯವಸ್ಥಾಪಕರು ಪಡೆದು ಸಾಲದ ಚೆಕ್‌ಗಳನ್ನು ಪಾರದರ್ಶಕವಾಗಿ ಜನಪ್ರತಿನಿಧಿಗಳ ಮೂಲಕ ವಿತರಿಸುವುದು.

**13. ಸಾಲದ ದಸ್ತಾವೇಜುಗಳು:–**

(1) ಮಂಜೂರು ಮಾಡಿ ಬಿಡುಗಡೆ ಮಾಡಿದ ಸಾಲದ ಮೊತ್ತಕ್ಕೆ ಪ್ರತಿ ಫಲಾನುಭವಿಯಿಂದ ಹಾಗೂ ಜಾಮೀನುದಾರರಿಂದ ಈ ಕೆಳಗೆ ತಿಳಿಸಿರುವ ದಸ್ತಾವೇಜುಗಳನ್ನು ಜಿಲ್ಲಾ ವ್ಯವಸ್ಥಾಪಕರು ಪಡೆದುಕೊಳ್ಳಬೇಕು ಹಾಗೂ ಅವುಗಳನ್ನು ಅರ್ಜಿದಾರರ ಹಾಗೂ ಜಾಮೀನುದಾರರ ಮಾಹಿತಿಯನ್ನು ನಿಗದಿತ ಅಂಕಣಗಳಲ್ಲಿ ಭರ್ತಿ ಮಾಡಿ ಅವರ ಸಹಿ ಪಡೆದುಕೊಳ್ಳಬೇಕು. ಸಾಲಕ್ಕೆ ಪಡೆಯಲಾದ ದಸ್ತಾವೇಜುಗಳನ್ನು ಜಿಲ್ಲಾ ಕಛೇರಿಯಲ್ಲಿ ಸಾಲ ತೀರುವವರೆಗೆ ಸುರಕ್ಷಿತವಾಗಿ ಸಂರಕ್ಷಿಸಿಟ್ಟಿರಬೇಕು.

ಅ. ಪ್ರಾಮಿಸರಿ ನೋಟ್
ಆ. ಡಿ.ಪಿ.ನೋಟ್ ಡೆಲಿವರಿ ಲೆಟರ್
ಇ. ಲೆಟರ್ ಆಫ್ ರೀಪೇಮೆಂಟ್
} ಸಾಲಗಾರರು

ಈ. ಹೈಪಾಥೀಕೇಷನ್ ಡೀಡ್

ಉ. ಲೆಟರ್ ಆಫ್ ಗ್ಯಾರಂಟಿ (ಜಾಮೀನುದಾರರು)

ಊ. ಮೆಮೊರ್‍ಯಾಂಡಮ್ ಆಫ್ ಅಗ್ರಿಮೆಂಟ್ ಜಾತಿವಾರು ಸಹಕಾರ ಸಂಘಗಳು / ಎನ್.ಜಿ.ಓ. / ಸ್ವ–ಸಹಾಯ ಗುಂಪುಗಳಿಂದ)

**14. ಸಾಲ ಮರುಪಾವತಿ:–**

(ಅ) ಸಾಲ ಮಂಜೂರು ಮಾಡಿ ಬಿಡುಗಡೆ ಮಾಡಿದ ಸಾಲದ ಮೊತ್ತವನ್ನು ನಿಗದಿತ ಕಂತುಗಳಲ್ಲಿ ಫಲಾನುಭವಿಯು ಗರಿಷ್ಠ 5 ವರ್ಷಗಳ ಒಳಗೆ ಮರುಪಾವತಿಸಬೇಕು. ಸಾಲ ಬಿಡುಗಡೆಯಾದ ನಂತರ ಘಟಕ ಸ್ಥಾಪಿಸಿ ನಡೆಸಲು ಸ್ವಲ್ಪ ಕಾಲಾವಕಾಶ ಬೇಕಾದುದರಿಂದ 2 ತಿಂಗಳ ವಿರಾಮಾವಧಿಯನ್ನು ನೀಡಲಾಗುತ್ತದೆ. ನಂತರ ಸಾಲ ಬಿಡುಗಡೆಯಾದ 3ನೇ ತಿಂಗಳಿನಿಂದ ಮರುಪಾವತಿಯು ಪ್ರಾರಂಭವಾಗುತ್ತದೆ. ಒಟ್ಟು 5 ವರ್ಷಗಳ ಒಳಗೆ ಸಾಲ ಪಡೆದ ದಿನಾಂಕದಿಂದ ಪೂರ್ಣ ಸಾಲವನ್ನು ಬಡ್ಡಿಯ ಸಮೇತ ಮರುಪಾವತಿಸಬೇಕು. 2 ತಿಂಗಳು ವಿರಾಮಾವಧಿ ಕಳೆದು 58 ಸಮನಾದ ಕಂತುಗಳಲ್ಲಿ ಸಾಲವನ್ನು ಮರುಪಾವತಿಸಬೇಕು. ಫಲಾನುಭವಿಯು ಮರುಪಾವತಿ

ಮಾಡಬೇಕಾದ ಪ್ರತಿ ಕಂತಿನ ಸಾಲದ ಅಸಲು ಮತ್ತು ಬಡ್ಡಿಯನ್ನು ಲೆಕ್ಕೀಕರಿಸಿ ಸಾಲ ಮಂಜೂರಾತಿ ಆದೇಶದಲ್ಲಿ ತಿಳಿಸಬೇಕು.

(ಆ) ನಿಗದಿಪಡಿಸಿದ ಕಂತಿನನ್ವಯ ಅಸಲು ಮತ್ತು ಬಡ್ಡಿಯನ್ನು ಪ್ರತಿ ತಿಂಗಳು 5ನೇ ತಾರೀಖಿನೊಳಗೆ ಮರುಪಾವತಿಸಬೇಕು. ಈ ದಿನಾಂಕದ ನಂತರವು ಸಾಲ ಮರುಪಾವತಿಸದೆ ಬಾಕಿ ಬೀಳುವ ಕಂತಿನ/ಕಂತುಗಳ ಸಾಲದ ಮೊತ್ತಕ್ಕೆ ವಾರ್ಷಿಕ ಶೇ. 2ರಷ್ಟು ಸುಸ್ತಿ ಬಡ್ಡಿಯನ್ನು ವಿಧಿಸಬೇಕು.

(ಇ) ನಿಗದಿತ ಕಂತುಗಳನ್ವಯ ಫಲಾನುಭವಿಯು ಸಾಲವನ್ನು ಮರುಪಾವತಿ ಮಾಡದೇ ಸುಸ್ತಿಯಾದ್ದಲ್ಲಿ ಕಾಲಾನುಕ್ರಮವಾಗಿ ಫಲಾನುಭವಿಗೆ ಹಾಗೂ ಜಾಮೀನುದಾರರಿಗೆ ನೋಟೀಸ್ ಜಾರಿ ಮಾಡಿ ಸಾಲ ಮರುಪಾವತಿಸುವಂತೆ ಸೂಕ್ತ ತಿಳುವಳಿಕೆ ನೀಡಬೇಕು. ಆದಾಗ್ಯೂ ಸಾಲ ಮರುಪಾವತಿಸದಿದ್ದಲ್ಲಿ ಬಾಕಿಯಿರುವ ಸಾಲದ ಮೊತ್ತವನ್ನು ವಸೂಲು ಮಾಡಲು ಘಟಕವನ್ನು ವಶಕ್ಕೆ ಪಡೆಯಬೇಕು ಹಾಗೂ ನಿಯಮಾನುಸಾರ ಕಾನೂನು ಕ್ರಮ ಕೈಗೊಳ್ಳುವುದು ಅಥವಾ KPMR Act ಅನ್ವಯ ಸಾಲ ವಸೂಲಾತಿಗೆ ಅರ್ಜಿದಾರರು ಹೊಂದಿರುವ ಸ್ಥಿರಾಸ್ತಿಯ ಮಾಹಿತಿ ಪಡೆದು ಭೂಕಂದಾಯ ಬಾಕಿಯೆಂದು ಪರಿಗಣಿಸಿ ಸಾಲ ವಸೂಲಿ ಮಾಡಲು ಕ್ರಮ ಜರುಗಿಸಬೇಕು. ಅಲ್ಲದೇ ಸರ್ಕಾರದಿಂದ ದೊರೆಯುವ ಇನ್ನಿತರ ಸೌಲಭ್ಯಗಳನ್ನು ಕಡಿತಗೊಳಿಸಲು ಕ್ರಮವಹಿಸಬೇಕು.

**15. ಸಾಲದ ಉಪಯೋಗ:-**

ಈ ಯೋಜನೆಯಲ್ಲಿ ಫಲಾನುಭವಿಯು ಸಾಲ ಮಂಜೂರಾದ ಉದ್ದೇಶಕ್ಕೆ ಉಪಯೋಗಿಸಿ ಘಟಕ ಸ್ಥಾಪನೆ ಮಾಡಿ ನಿರ್ವಹಿಸಬೇಕು. ಒಂದು ವೇಳೆ ಮಂಜೂರಾದ ಸಾಲವನ್ನು ಮಂಜೂರಾದ ಉದ್ದೇಶಕ್ಕೆ ಉಪಯೋಗಿಸದೇ ಅಥವಾ ಒಂದು ಪಕ್ಷ ಹಣವನ್ನು ಬೇರೆ ಉದ್ದೇಶಕ್ಕೆ ಉಪಯೋಗಿಸಿರುವುದು ಕಂಡುಬಂದರೆ ಜಿಲ್ಲಾ ಸಮಿತಿಯ ಸದಸ್ಯ ಕಾರ್ಯದರ್ಶಿಗಳು ಪೂರ್ಣ ಸಾಲವನ್ನು ಒಂದೇ ಇಡಿಗಂಟಿನಲ್ಲಿ ವಸೂಲಿ ಮಾಡಲು ಕ್ರಮ ಜರುಗಿಸುವುದು.

**16. ವಿಮೆ:**

ಫಲಾನುಭವಿಗಳು ಪಡೆಯುವ ಸಾಲದ ಮೊತ್ತದಲ್ಲಿ ಖರೀದಿಸುವ ಉತ್ಪನ್ನಗಳಿಗೆ/ಘಟಕಗಳಿಗೆ ವ್ಯಾಪಕ ವಿಮೆಯನ್ನು ಮಾಡಿಸಬೇಕು.

ನಿಗಮದಿಂದ ಸಾಲ ಪಡೆದು ನಡೆಸಲ್ಪಡುವ ಘಟಕಗಳ/ಸ್ಥಳಗಳ ಪ್ರವೇಶದ್ವಾರದಲ್ಲಿ "ಆರ್ಥಿಕ ನೆರವು : ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ, __________ ಜಿಲ್ಲೆ, ಇವರಿಂದ ಎಂದು ಬೋರ್ಡನ್ನು/ಫಲಕಗಳನ್ನು ಬರೆಯಿಸಿರಬೇಕು.

**ಎ.ಎಂ.ಚಿದಾನಂದ ಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 870

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಸರ್ಕಾರದ ಕಾರ್ಯದರ್ಶಿ, (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ) ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 15 ಸಸಿವಿ 2001 ದಿನಾಂಕ: 20.4.2001.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 4 ಸಸಿವಿ 2002 ದಿನಾಂಕ: 4.4.2002.
3. ಅನಧಿಕೃತ ಟಿಪ್ಪಣಿ ಸಂಖ್ಯೆ: ಕೃತೋಇ : 53 : ಕಾ (ಆಸಂ) : 2005, ದಿನಾಂಕ: 29.12.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಕೃಷಿ ಮತ್ತು ತೋಟಗಾರಿಕೆ ಇಲಾಖೆಯಲ್ಲಿ ದಿನಾಂಕ: 15.3.2001 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದೆ.

| | | |
|---|---|---|
| 1. | ವಿಶೇಷ ಕಾರ್ಯದರ್ಶಿ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ) (ಸೂಪರ್ ಟೈಂ ವೇತನ ಶ್ರೇಣಿಯ ಐ.ಎ.ಎಸ್. ಅಧಿಕಾರಿಯಿಂದ ತುಂಬುವುದು) | 1 |
| 2. | ಶೀಘ್ರಲಿಪಿಗಾರರು | 2 |
| 3. | ಕಿರಿಯ ಸಹಾಯಕರು | 1 |
| 4. | ವಾಹನ ಚಾಲಕರು | 1 |
| 5. | ದಲಾಯತ್ | 1 |

ಕ್ರಮ ಸಂಖ್ಯೆ (2) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ವಿಶೇಷ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 10.1.2002 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಒಂದು ವರ್ಷದ ಅವಧಿಗೆ ಉನ್ನತೀಕರಿಸಿ, ಮೇಲ್ಕಂಡ ಪೂರಕ ಸಿಬ್ಬಂದಿ ಹುದ್ದೆಗಳ ಬದಲು ದಿನಾಂಕ: 10.1.2002 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಕೆಳಕಂಡ ಹುದ್ದೆಗಳನ್ನು ಮಂಜೂರು ಮಾಡಲಾಗಿದೆ.

| | | |
|---|---|---|
| 1. | ಆಪ್ತ ಕಾರ್ಯದರ್ಶಿ ಗ್ರೇಡ್-2 : ಪತ್ರಾಂಕಿತ ಆಪ್ತ ಸಹಾಯಕ | 1 |
| 2. | ಪತ್ರಾಂಕಿತ ಆಪ್ತ ಸಹಾಯಕ : ಹಿರಿಯ ಶೀಘ್ರಲಿಪಿಗಾರ | 2 |
| 3. | ಶಾಖಾಧಿಕಾರಿ : ಹಿರಿಯ ಸಹಾಯಕ | 1 |
| 4. | ಸಹಾಯಕ : ಕಿರಿಯ ಸಹಾಯಕ | 1 |
| 5. | ವಾಹನ ಚಾಲಕ | 1 |
| 6. | ದಲಾಯತ್ | 2 |

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾಗಿರುವ ಟಿಪ್ಪಣಿಯಲ್ಲಿ ಹುದ್ದೆಗಳನ್ನು ಮುಂದುವರೆಸಲು ಪ್ರಸ್ತಾವನೆ ಇರುತ್ತದೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 40 ಸಸಿವಿ 2006, ಬೆಂಗಳೂರು, ದಿನಾಂಕ: 29ನೇ ಮೇ 2006.**

ಕರ್ನಾಟಕ ಸರ್ಕಾರ ಸಚಿವಾಲಯದ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ) ಹುದ್ದೆಯನ್ನು ಪ್ರಸ್ತಾವನೆಯಲ್ಲಿ ವಿವರಿಸಲಾದ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.4.2005 ರಿಂದ 31.3.2007 ರವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆಃ ಆಇ 1 ಟಿಎಫ್‌ಪಿ 96, ದಿನಾಂಕಃ 10.7.1996 ರಲ್ಲಿ ನೀಡಿರುವ ಸಹಮತಿ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ.ಪ್ರಭು**
ಪಿ.ಆರ್. 859 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ(ಸೇವೆಗಳು–2)

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಸರ್ಕಾರದ ಕಾರ್ಯದರ್ಶಿ : ಪ್ರಧಾನ ಕಾರ್ಯದರ್ಶಿ ಹುದ್ದೆಗಳನ್ನು ಮರುಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ:** ಅಧಿಸೂಚನೆ ಸಂಖ್ಯೆ: ಡಿಪಿಎಆರ್ 207 ಎಸ್‌ಎಎಸ್ 2006 ದಿನಾಂಕ: 4.2.2006.

ಪ್ರಸ್ತಾವನೆ:

ಮೇಲೆ ಓದಲಾಗಿರುವ ದಿನಾಂಕ: 4.2.2006ರ ಅಧಿಸೂಚನೆಯಲ್ಲಿ ಈ ಕೆಳಕಂಡ ಅಧಿಕಾರಿಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಲಾಗಿದೆ.

1. ಶ್ರೀ ಸಯ್ಯದ್ ಜಮೀರ್ ಪಾಷಾ, ಐ.ಎ.ಎಸ್. ಸಿ.ಆ.ಸು.ಇಲಾಖೆಯಲ್ಲಿನ ನಿಮ್ನೀಕರಿಸಿದ ಕಾರ್ಯದರ್ಶಿ ಹುದ್ದೆ.
2. ಶ್ರೀ ಅನೂಪ್ ಡಿ.ಪೂಜಾರಿ, ಐ.ಎ.ಎಸ್. ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಮತ್ತು ವಿಜ್ಞಾನ ಹಾಗೂ ತಂತ್ರಜ್ಞಾನ ಇಲಾಖೆಯ ಉನ್ನತೀಕರಿಸಿದ ಪ್ರಧಾನ ಕಾರ್ಯದರ್ಶಿ ಹುದ್ದೆ.
3. ಶ್ರೀ ವೆಂಕಟೇಶ್ವರರಾವ್, ಐ.ಎ.ಎಸ್. ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಉನ್ನತೀಕರಿಸಿದ ಪ್ರಧಾನ ಕಾರ್ಯದರ್ಶಿ ಹುದ್ದೆ.

ಈ ಕಾರಣದಿಂದಾಗಿ ಸದರಿ ಇಲಾಖೆಗಳಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ಪ್ರಧಾನ ಕಾರ್ಯದರ್ಶಿ : ಕಾರ್ಯದರ್ಶಿ ಹುದ್ದೆಯನ್ನು ಶ್ರೀಯುತರುಗಳು ಕಾರ್ಯ ವರದಿ ಮಾಡಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಮರುಪದನಾಮೀಕರಿಸುವ ಅಗತ್ಯತೆ ಕಂಡು ಬಂದಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 38 ಸಸಿವಿ 2006, ಬೆಂಗಳೂರು, ದಿನಾಂಕ: 15ನೇ ಮೇ 2006.**

ಪ್ರಸ್ತಾವನೆಯಲ್ಲಿ ಸೂಚಿಸಿದ ಕರ್ನಾಟಕ ಸರ್ಕಾರ ಸಚಿವಾಲಯದ ಇಲಾಖೆಗಳಲ್ಲಿನ ಪ್ರಧಾನ ಕಾರ್ಯದರ್ಶಿ : ಕಾರ್ಯದರ್ಶಿ ಹುದ್ದೆಗಳನ್ನು ಆ ಹುದ್ದೆಗಳಲ್ಲಿ ವರ್ಗಾಯಿಸಿದ ಅಧಿಕಾರಿಗಳು ಕಾರ್ಯವರದಿ ಮಾಡಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ಮರುಪದನಾಮೀಕರಿಸಲಾಗಿದೆ ಮತ್ತು ಆ ಹುದ್ದೆಗಳಿಗೆ ನಿಗದಿಪಡಿಸಿರುವ ಪೂರಕ ಸಿಬ್ಬಂದಿಯನ್ನು ಸಹ ಮಂಜೂರು ಮಾಡಿದೆ.

| | ಪ್ರಸ್ತುತ ಅಸ್ಥಿತ್ವದಲ್ಲಿರುವ ಹುದ್ದೆಯ ಪದನಾಮ | ಮರುಪದನಾಮೀಕರಣಗೊಳಿಸಿರುವ ಹುದ್ದೆಯ ಪದನಾಮ |
|---|---|---|
| 1 | ಪ್ರಧಾನ ಕಾರ್ಯದರ್ಶಿ<br>ಸಿ.ಆ.ಸು.ಇಲಾಖೆ | ಕಾರ್ಯದರ್ಶಿ,<br>ಸಿ.ಆ.ಸು.ಇಲಾಖೆ |
| 2 | ಕಾರ್ಯದರ್ಶಿ<br>ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ | ಪ್ರಧಾನ ಕಾರ್ಯದರ್ಶಿ<br>ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ |
| 3 | ಕಾರ್ಯದರ್ಶಿ<br>ಕೃಷಿ ಮತ್ತು ತೋಟಗಾರಿಕೆ ಇಲಾಖೆ | ಪ್ರಧಾನ ಕಾರ್ಯದರ್ಶಿ<br>ಕೃಷಿ ಮತ್ತು ತೋಟಗಾರಿಕೆ ಇಲಾಖೆ |

ಸದರಿ ಆದೇಶವನ್ನು ಆರ್ಥಿಕ ಇಲಾಖೆಯು ಸರ್ಕಾರಿ ಆದೇಶ ಸಂಖ್ಯೆಃ ಎಫ್‌ಡಿ 1 ಟಿಎಫ್‌ಪಿ 96, ದಿನಾಂಕಃ 10.7.1996 ರಲ್ಲಿ ಅನುಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ.ಪ್ರಭು**
ಪಿ.ಆರ್. 820 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ(ಸೇವೆಗಳು–2)

**ವಿಷಯ:** ಶ್ರೀ ಆರ್.ಜೆ.ವಾಲೀಕರ್, ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಮತ್ತು ಶ್ರೀ ಎಂ.ಜವರಯ್ಯ, ನಿವೃತ್ತ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರುಗಳ ಅಮಾನತ್ತಿನ ಅವಧಿಯನ್ನು ಇತ್ಯರ್ಥ ಪಡಿಸುವ ಬಗ್ಗೆ.

**ಓದಲಾಗಿದೆ:**
1 ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ ៥៦ ಎಸ್‌ಇಎಸ್ ೦೧ ದಿ:೨೬.೦೩.೦೧.
2 ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ ೪೬ ಎಸ್‌ಇಎಸ್ ೦೧ ದಿ:೨೭.೦೩.೦೨.
3 ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ ೪೬ ಎಸ್‌ಇಎಸ್ ೦೧ ದಿ:೦೬.೦೮.೦೪.
4 ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ ೪೬ ಎಸ್‌ಇಎಸ್ ೦೧ ದಿ:೦೮.೧೧.೦೪.
5 ನೋಟೀಸ್ ಸಂಖ್ಯೆ:ಸಿಆಸುಇ ೪೬ ಎಸ್‌ಇಎಸ್ ೦೧ ದಿ:೦೪.೧೧.೦೪ ಮತ್ತು ೦೮.೦೯.೦೫.
6 ಶ್ರೀ ಆರ್.ಜೆ.ವಾಲೀಕರ್ ಮತ್ತು ಜವರಯ್ಯ ಅವರುಗಳು ಉತ್ತರ ಸಲ್ಲಿಸಿರುವುದಿಲ್ಲ.

**ಪ್ರಸ್ತಾವನೆ:** ಶ್ರೀ ಆರ್.ಜೆ.ವಾಲೀಕರ್, ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಅವರು ಚಾಮರಾಜನಗರ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯಾಗಿ, ಶ್ರೀ ಎಂ.ಜವರಯ್ಯ ಅವರು ಚಾಮರಾಜನಗರ ಜಿಲ್ಲಾ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ೧೯೯೯-೨೦೦೦ನೇ ಸಾಲಿನಲ್ಲಿ ಅನುದಾನ ಲಭ್ಯವಿರದಿದ್ದರೂ

ತಪ್ಪು ಮಾಹಿತಿ ನೀಡಿ ನಿಯಮಬಾಹಿರವಾಗಿ ರೂ.೧.೦೦ ಕೋಟಿಗಳಿಗೂ ಮೀರಿದಂತೆ ಪೀಠೋಪಕರಣ, ಲೇಖನ ಸಾಮಗ್ರಿಗಳನ್ನು ಖರೀದಿ ಮಾಡುವ ಮೂಲಕ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿರುವ ಆರೋಪಕ್ಕಾಗಿ ಮೇಲ್ಕಂಡ ಆರೋಪಿತರುಗಳು ಹಾಗೂ ಇತರರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆದು ಮೇಲೆ (೩)ರಲ್ಲಿ ಓದಲಾದ ದಿ:೦೬.೦೮.೦೪ರ ಸರ್ಕಾರಿ ಆದೇಶದಲ್ಲಿ ಶ್ರೀ ಆರ್.ಜೆ.ವಾಲೀಕರ್ ಅವರ ಮುಂದಿನ ೩ ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರದಂತೆ ಮತ್ತು ಮೇಲೆ (೪)ರಲ್ಲಿ ಓದಲಾದ ದಿ:೦೮.೧೧.೦೪ರ ಸರ್ಕಾರಿ ಆದೇಶದಲ್ಲಿ ಶ್ರೀ ಎಂ.ಜವರಯ್ಯ, ನಿವೃತ್ತ ಉಪ ನಿರ್ದೇಶಕರು ಅವರ ನಿವೃತ್ತಿ ಸೌಲಭ್ಯಗಳಿಂದ ಸರ್ಕಾರಕ್ಕೆ ನಷ್ಟವಾಗಿರುವ ರೂ.೪,೦೬,೮೭೨/-ಗಳನ್ನು ವಸೂಲು ಮಾಡುವ ಹಾಗೂ ಮಾಸಿಕ ವಿಶ್ರಾಂತಿ ವೇತನದಿಂದ ರೂ.೧,೦೦೦/-ಗಳನ್ನು ನಿರಂತರವಾಗಿ ಕಡಿತಗೊಳಿಸುವ ದಂಡನೆ ವಿಧಿಸಲಾಗಿದೆ. ಈ ವಿಚಾರಣೆಯನ್ನು ಕಾಯ್ದಿಟ್ಟು ಶ್ರೀ ಆರ್.ಜೆ.ವಾಲೀಕರ್, ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಹಾಗೂ ಶ್ರೀ ಜವರಯ್ಯ, ನಿವೃತ್ತ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಅವರುಗಳನ್ನು ಮೇಲೆ (೧)ರಲ್ಲಿ ಓದಲಾದ ದಿ:೨೬.೦೩.೦೧ರ ಸರ್ಕಾರಿ ಆದೇಶದಲ್ಲಿ ಸೇವೆಯಿಂದ ಅಮಾನತ್ತಿನಲ್ಲಿಡಲಾಯಿತು. ಹಾಗೂ ಮೇಲೆ (೨)ರಲ್ಲಿ ಓದಲಾದ ದಿ:೨೭.೦೩.೦೨ರ ಸರ್ಕಾರಿ ಆದೇಶದಲ್ಲಿ ಮತ್ತೆ ಸೇವೆಗೆ ತೆಗೆದುಕೊಳ್ಳಲಾಯಿತು. ಸದರಿ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಮೇಲೆ ಕಳೆಯದ ಅವಧಿಯೆಂದು ಏಕೆ ಪರಿಗಣಿಸಬಾರದೆಂಬುದಕ್ಕೆ ಸಮಜಾಯಿಷಿ ಕೇಳಿ ಶ್ರೀ ಆರ್.ಜೆ.ವಾಲೀಕರ್ ಅವರಿಗೆ ದಿ:೦೪.೧೦.೦೪ ಮತ್ತು ಶ್ರೀ ಎಂ.ಜವರಯ್ಯ ಅವರಿಗೆ ದಿ:೦೮.೦೯.೦೫ರಂದು ಮೇಲೆ (೫)ರಲ್ಲಿ ಓದಲಾದ ನೋಟೀಸ್ ನೀಡಲಾಯಿತು. ಈ ನೋಟೀಸಿಗೆ ಅವರುಗಳು ಉತ್ತರ ನೀಡಿರುವುದಿಲ್ಲ. ಹೀಗಾಗಿ ಅವರ ಹೇಳಿಕೆ ಏನೂ ಇಲ್ಲವೆಂದು ಭಾವಿಸಿ ಈಗಾಗಲೇ ವಿಚಾರಣೆಯು ದಾಖಲೆಗಳನ್ನಾಧರಿಸಿ ಕ್ರಮಬದ್ಧವಾಗಿ ನಡೆದಿದ್ದು, ದಂಡನೆ ವಿಧಿಸಲಾಗಿದೆ. ಆದ್ದರಿಂದ ಶ್ರೀ ಆರ್.ಜೆ.ವಾಲೀಕರ್, ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಮತ್ತು ಶ್ರೀ ಜವರಯ್ಯ, ನಿವೃತ್ತ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಅವರುಗಳು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 46 ಎಸ್ಇಎನ್ 01 ಬೆಂಗಳೂರು ದಿನಾಂಕ:3ನೇ ಜೂನ್ 2006.**

ಕರ್ನಾಟಕ ನಾಗರೀಕ ಸೇವಾ ನಿಯಮದ ೧೦೦(೫)ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಆರ್.ಜೆ.ವಾಲೀಕರ್, ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಮತ್ತು ಶ್ರೀ ಜವರಯ್ಯ, ನಿವೃತ್ತ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಅವರುಗಳು ತಮ್ಮಗಳ ವಿರುದ್ಧ ನಡೆದ ಇಲಾಖಾ ವಿಚಾರಣೆ ಸಂಬಂಧ ದಿನಾಂಕ:೨೬.೦೩.೦೧ ರಿಂದ ೨೭.೦೩.೦೨ರ (ಎರಡು ದಿನಗಳು ಸೇರಿ) ಸರ್ಕಾರಿ ಆದೇಶಗಳ ನಡುವೆ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು "ಅಮಾನತ್ತಿನ ಅವಧಿ" ಎಂದೇ ಪರಿಗಣಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-೩).

ಪಿ.ಆರ್. 884

**ವಿಷಯ:** ಶ್ರೀಮತಿ ಪುಷ್ಪರಾಣಿ, ನಿವೃತ್ತ ಸರ್ಕಾರದ ಉಪ ಕಾರ್ಯದರ್ಶಿ ಅವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರಡಿ ಕ್ರಮ ಕೈಗೊಳ್ಳುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 18 ಎಸ್ಇಎನ್ 06 ಬೆಂಗಳೂರು , ದಿನಾಂಕ:29ನೇ ಮೇ 2006.**

ಶ್ರೀಮತಿ ಪಿ.ಪುಷ್ಪರಾಣಿ, ನಿವೃತ್ತ ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ರವರ ದಿ:09.08.99 ರಿಂದ 06.11.04ರವರೆಗೆ ಕರ್ನಾಟಕ ಸರ್ಕಾರದ ಸಚಿವಾಲಯದ ಯೋಜನೆ ಮತ್ತು ಸಾಂಖ್ಯಿಕ ಇಲಾಖೆಯಲ್ಲಿ ಅಧೀನ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಶ್ರೀ ಹೆಚ್.ಎಸ್. ಶ್ರೀಧರಮೂರ್ತಿ, ಪ್ರಸ್ತುತ ನಿರ್ದೇಶಕರು, ಪಿ.ಎಂ.ಐ ವಿಭಾಗ, ಯೋಜನೆ ಮತ್ತು ಸಾಂಖ್ಯಿಕ ಇಲಾಖೆ (ಹಿಂದಿನ ಉಪ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು) ಇವರ ವಿರುದ್ಧ ಇಲಾಖಾ ವಿಚಾರಣೆಗೆ ಸಂಬಂಧಿಸಿದಂತೆ ಹಿಂದಿನ ಮಾನ್ಯ ಮುಖ್ಯಮಂತ್ರಿಯವರಿಂದ ದೋಷಾರೋಪಣೆ ಪಟ್ಟಿ ಹೊರಡಿಸಲು ಅನುಮೋದನೆ ನೀಡಿದ್ದ ಕಡತದ ಸಂ:ಐಎಫ್ಎಸ್ 201 ಡಿಎಸ್ಇ 92ರಲ್ಲಿ ಯಾವುದೇ ಕ್ರಮ ಜರುಗಿಸದೇ ದಿ:06.11.04ರಂದು ಮುಂಬಡ್ತಿ ಹೊಂದಿ ಬಿಡುಗಡೆಯಾಗಿರುವುದರ ಮೂಲಕ ಕರ್ತವ್ಯಲೋಪವೆಸಗಿರುವುದು ಸರ್ಕಾರದ ಗಮನಕ್ಕೆ ಬಂದಿರುವುದರಿಂದಲೂ,

ಮೇಲ್ಕಂಡ ದುರ್ನಡತೆಗಾಗಿ ಶ್ರೀಮತಿ ಪಿ.ಪುಷ್ಪರಾಣಿ, ನಿವೃತ್ತ ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸಬೇಕೆಂದು ಸರ್ಕಾರ ಭಾವಿಸಿರುವುದರಿಂದಲೂ,

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 214ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀಮತಿ ಪಿ.ಪುಷ್ಪರಾಣಿ, ನಿವೃತ್ತ ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ಇಲಾಖಾ ವಿಚಾರಣೆ ನಡೆಸಬೇಕೆಂದು ಹಾಗೂ ಈ ವಿಚಾರಣೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ ನಿಯಮ 11,11-ಎ ರಲ್ಲಿ ನಿಗದಿಪಡಿಸಿದ ಕಾರ್ಯವಿಧಾನವನ್ನು ಅನುಸರಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ
ಸುಧಾರಣಾ ಇಲಾಖೆ, (ಸೇವೆಗಳು-೩).

ಪಿ.ಆರ್. 863

**ವಿಷಯ:** ಶ್ರೀ ಎಂ.ವಿ.ಶೀಲವಂತ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1 ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 34 ಎಸ್‌ಇಎನ್ 2004 ದಿನಾಂಕ:25.11.2005.
2 ಶ್ರೀ ಎಂ.ವಿ.ಶೀಲವಂತ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರ ವರದಿ ದಿನಾಂಕ: 02.05.2006.

**ಪ್ರಸ್ತಾವನೆ:** ಶ್ರೀ ಜಿ.ವಿ.ನಾಯಕ್, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ಇವರು ಈ ಹಿಂದೆ ಬೆಳಗಾಂ ವಿಭಾಗೀಯ ಸಾರ್ವಜನಿಕ ಶಿಕ್ಷಣ ಇಲಾಖೆಯ ಸಹ ನಿರ್ದೇಶಕರಾಗಿದ್ದಾಗ 1998-99ನೇ ಸಾಲಿನ ವಿಶೇಷ ಶಿಕ್ಷಕರ ನೇಮಕಾತಿಗಳ ಪ್ರಕ್ರಿಯೆಯಲ್ಲಿ ತಾತ್ಕಾಲಿಕ ಆಯ್ಕೆ ಪಟ್ಟಿಯ ಪ್ರಕಟಣೆಯ ನಂತರ 5 ಮಂದಿ ಅಭ್ಯರ್ಥಿಗಳಿಂದ ಅರ್ಜಿಯೊಂದಿಗೆ ಸಲ್ಲಿಸದಿದ್ದ ಅಂಕ ಪಟ್ಟಿ/ಮೀಸಲಾತಿ ಪ್ರಮಾಣ ಪತ್ರ ಇತ್ಯಾದಿಗಳನ್ನು ಪಡೆದು ಅಂತಿಮ ಆಯ್ಕೆ ಪಟ್ಟಿಯಲ್ಲಿ ನೇಮಕಾತಿಗೆ ಪರಿಗಣಿಸಿದ ಹಾಗೂ ಇಬ್ಬರು ಅಭ್ಯರ್ಥಿಗಳು ವಿಶ್ವವಿದ್ಯಾಲಯ ಪದವಿ ಹೊಂದದೆ ಇದ್ದರೂ ಸಹ ಅವರುಗಳನ್ನು ಮೀಸಲಾತಿ ಗುಂಪಿನಲ್ಲಿ ಸಂಗೀತ ಶಿಕ್ಷಕರನ್ನಾಗಿ ಆಯ್ಕೆ ಮಾಡಿ ನೇಮಕಾತಿ ಆದೇಶ ನೀಡಿದ ಆರೋಪಗಳಿಗಾಗಿ ಶ್ರೀ ಜಿ.ವಿ.ನಾಯಕ್ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ(1) ರಲ್ಲಿ ಓದಲಾದ ದಿನಾಂಕ:25.11.2005ರ ಸರ್ಕಾರಿ ಆದೇಶದಲ್ಲಿ ಶ್ರೀ ಎಂ.ವಿ.ಶೀಲವಂತ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ(2) ರಲ್ಲಿ ಓದಲಾದ ದಿನಾಂಕ:02.05.2006ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವಧನ ಹಾಗೂ ವಾಹನಭತ್ಯೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 34 ಎಸ್‌ಇಎನ್ 2004 ಬೆಂಗಳೂರು ದಿನಾಂಕ:31ನೇ ಮೇ 2006.**

ಸರ್ಕಾರವು ಶ್ರೀ ಎಂ.ವಿ.ಶೀಲವಂತ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರು ವಿಚಾರಣಾ ವರದಿ ಸಲ್ಲಿಸಿದ ಕಾರಣ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 16 ಸೇಇವಿ 05 ದಿನಾಂಕ:23.08.2005 ರನ್ವಯ ರೂ.6,000/- (ಆರು ಸಾವಿರ ರೂಪಾಯಿಗಳು ಮಾತ್ರ) ಗೌರವ ಧನವನ್ನು ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001, ದಿನಾಂಕ:04.03.2002 ರನ್ವಯ ರೂ.1,000/- (ಒಂದು ಸಾವಿರ ರೂಪಾಯಿಗಳು ಮಾತ್ರ) ವಾಹನ ಭತ್ಯೆಯನ್ನು ಇವರಿಗೆ ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ "2052 ಸಚಿವಾಲಯ ಸಾಮಾನ್ಯ ಸೇವೆಗಳು-090- ಸಚಿವಾಲಯ-01, ಕರ್ನಾಟಕ ಸರ್ಕಾರದ ಸಚಿವಾಲಯ-051 ಸಾಮಾನ್ಯ ವೆಚ್ಚಗಳು"ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 864 ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-೩).

**ವಿಷಯ:** ಶ್ರೀಮತಿ ಇಂದುಮತಿ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಇವರ ವಿರುದ್ಧ ಇಲಾಖಾ ವಿಚಾರಣೆ-ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1 ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 33 ಎಸ್‌ಇಎನ್ 04 ದಿನಾಂಕ:17.01.06.
2 ಶ್ರೀ ಎನ್.ಎಸ್.ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ರವರ ದ:06.03.06ರ ವಿಚಾರಣಾ ವರದಿ.
3 ನೋಟೀಸ್ ಸಂಖ್ಯೆ:ಸಿಆಸುಇ 33 ಎಸ್‌ಇಎನ್ 04 ದಿನಾಂಕ:18.03.06.
4 ಶ್ರೀಮತಿ ಎಸ್.ಇಂದುಮತಿ, ಸರ್ಕಾರದ ಅಧೀನ ಕಾರ್ಯದರ್ಶಿರವರ ದಿನಾಂಕ:22.03.06ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಶ್ರೀಮತಿ ಎಸ್.ಇಂದುಮತಿ, ಸರ್ಕಾರದ ಅಧೀನ ಕಾರ್ಯದರ್ಶಿ ಅವರು ವಸತಿ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ, (1)ದಿ:30.01.04ರಿಂದ ದಿ:10.02.04ರವರೆಗೆ ಬ್ಯಾಡ್ಮಿಂಟನ್ ಪಂದ್ಯಾವಳಿಯಲ್ಲಿ ಭಾಗವಹಿಸಲು ವಿಶೇಷ ಸಾಂದರ್ಭಿಕ ರಜೆ ಉಪಯೋಗಿಸಿಕೊಳ್ಳಲು ಕೇಳಿಕೊಂಡಿದ್ದು, ವಿಧಾನ ಮಂಡಲದ ಅಧಿವೇಶನ ಪ್ರಾರಂಭವಾಗಿದ್ದರಿಂದ ಅದನ್ನು ತಿರಸ್ಕರಿಸಿ, ಕೆಲಸಕ್ಕೆ ಹಾಜರಾಗಬೇಕೆಂದು ತಿಳಿಸಿದ್ದರೂ ಸಹ ಅವರು ಸದರಿ ಸೂಚನೆ ಮೀರಿ ಬ್ಯಾಡ್ಮಿಂಟನ್ ಪಂದ್ಯಾವಳಿಯಲ್ಲಿ ಭಾಗವಹಿಸಿರುವ ಹಾಗೂ (2)ಸಂತೆಮಾರನಹಳ್ಳಿ ವಿಧಾನ ಸಭಾ ಕ್ಷೇತ್ರದ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನಾಗಿ ಶ್ರೀ ಫಯಾಜ್ ಅಹಮದ್ ಇವರ ಬದಲಿಗೆ ಶ್ರೀ ಪಟೇಲ್ ಮಾದಪ್ಪ ಬಿನ್ ಪಟೇಲ್ ಶಿವಣ್ಣ ಇವರನ್ನು ನೇಮಕ ಮಾಡುವ ಪ್ರಸ್ತಾವನೆಯನ್ನು ಮಾನ್ಯ ಮುಖ್ಯಮಂತ್ರಿಗಳು ಒಪ್ಪದೇ ಹಾಲಿ ಸದಸ್ಯರಾದ ಶ್ರೀ ಫಯಾಜ್ ಅಹಮದ್ ಅವರನ್ನು ಮುಂದುವರಿಸಲು ಕಡತದಲ್ಲಿ ಮಾಡಿದ ಆದೇಶವನ್ನು ಸರಿಯಾಗಿ ಪರಿಶೀಲಿಸದೆ ಶ್ರೀ ಪಟೇಲ್ ಮಾದಪ್ಪನವರನ್ನು ಆಶ್ರಯ ಸಮಿತಿ ಸದಸ್ಯರನ್ನಾಗಿ ನೇಮಿಸಿ ಆದೇಶ ಹೊರಡಿಸಿದ ದುರ್ನಡತೆಯ ಆರೋಪಗಳಿಗಾಗಿ ಶ್ರೀಮತಿ ಎಸ್.ಇಂದುಮತಿ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಮೇಲೆ (1)ರಲ್ಲಿ ಓದಲಾದ ದಿನಾಂಕ:17.01.06ರ ಸರ್ಕಾರಿ ಆದೇಶದಲ್ಲಿ ಶ್ರೀ ಎನ್.ಎಸ್.ಸಂಗೊಳ್ಳಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳಾಗಿ ನೇಮಿಸಲಾಯಿತು.

ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ(2)ರಲ್ಲಿ ಓದಲಾದ ದಿನಾಂಕ:06.03.06ರಲ್ಲಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದಾರೆ. ಸದರಿ ವರದಿಯಲ್ಲಿ ಒಂದನೇ ಆರೋಪ ರುಜುವಾತಾಗಿಲ್ಲವೆಂದೂ, ಎರಡನೇ ಆರೋಪ

"ಆಶ್ರಯ ಸಮಿತಿಯೊಂದರ ಹಾಲಿ ಸದಸ್ಯರನ್ನು ಮುಂದುವರಿಸಲು ಮುಖ್ಯಮಂತ್ರಿಗಳು ಆದೇಶ ಮಾಡಿದ್ದರೂ ಅದನ್ನು ಪಾಲಿಸದೆ ವ್ಯತಿರಿಕ್ತವಾದ ಆದೇಶವನ್ನು ಹೊರಡಿಸಿರುತ್ತಾರೆ."

ಎಂಬುದು ರುಜುವಾತಾಗಿದೆ ಎಂದೂ ತಿಳಿಸಿರುತ್ತಾರೆ. ಮೇಲೆ(3)ರಲ್ಲಿ ಓದಲಾದ ದಿ:18.03.06ರ ಎರಡನೇ ಕಾರಣ ಕೇಳಿ ನೋಟೀಸ್ ಜೊತೆ ಈ ವಿಚಾರಣಾ ವರದಿಯನ್ನು ಆಪಾದಿತರಿಗೆ ಒದಗಿಸಿ ಮೇಲೆ (4)ರಲ್ಲಿ ಓದಲಾದ ಲಿಖಿತ ಉತ್ತರದಲ್ಲಿ ವಿವರಣೆಯನ್ನು ಪಡೆಯಲಾಗಿದೆ. ಎರಡನೇ ಆರೋಪದ ಬಗ್ಗೆ ಅವರು ದುರುದ್ದೇಶದಿಂದ ಮಾಡಿಲ್ಲವೆಂದು, ಕೇವಲ ಕಣ್ತಪ್ಪಿನಿಂದ ಹೊರಡಿಸಿರುವ ಆದೇಶವೆಂದು ಮನವಿ ಮಾಡಿಕೊಂಡಿರುತ್ತಾರೆ.

ವಿಚಾರಣಾ ವರದಿಯನ್ನು ಮತ್ತು ಆಪಾದಿತರ ವಿವರಣೆಯನ್ನು ಪರಿಶೀಲಿಸಲಾಗಿ, ಒಂದನೇ ಆರೋಪದ ಬಗ್ಗೆ ಆರೋಪಿತರ ರಜೆ ಮನವಿಯನ್ನು ವಸತಿ ಇಲಾಖೆಯ ಹೆಚ್ಚುವರಿ ಕಾರ್ಯದರ್ಶಿಯವರು ಪ್ರಧಾನ ಕಾರ್ಯದರ್ಶಿಯವರಿಗೆ

